

# ಪಶು-ಪಕ್ಷಿಗಳ

## ವಿಜ್ಞಾಪನ ಚಂದ್ರಿಕೆ.

ಪ್ರಕಾಶಕ:—ಬಿ. ಅಣ್ಣಾ ಮಲೆ ಮೊದಲಿಯರ, ಹರಿಹರ.

[೧೦೦೦ ಪ್ರತಿಗಳು.]

೧೯೨೪

ಶ್ರೀ ಹರಿಹರೇಶ್ವರ ಅನುಗ್ರಹಮಸ್ತು.

# ಪಶು-ಪಕ್ಷಿಗಳ ವಿಜ್ಞಾಪನ ಚಂದ್ರಿಕೆ.



ಸ್ತೋತ್ರ. ಕಂದ || ಸರ್ವೇಶ್ವರ ಸರ್ವಾತ್ಮಕ ಸರ್ವಾನುರೂಪ ||
ಧಾರಣಾ ಕುಶಲ ಸರ್ವಧರಾಧರ ವಿಭು ||
ಸರ್ವಾಂತರ್ಯಾಮಿ ನಮೋಸ್ತು ನಮೋಸ್ತುತೆ ||

ಸರ್ವಾಂತರ್ಯಾಮಿಯಾದ ಭಗವಂತನನ್ನು, ನಮಸ್ಕರಿಸಿ ಮೂಗಾತ್ಮ ರಕ್ಷಕರಿಗೂ ದೀನಾತ್ಮ ಪೋಷಕರಿಗೂ ಜಯವಾಗಲೆಂದು ಪ್ರಾರ್ಥಿಸುವೆನು.

ಅಖಿಲ ಭಾರತಮಾತಾ ಪುತ್ರರೇ, ನನ್ನ ಆತ್ಮಬಂಧುಗಳಾದ ಪ್ರಿಯ ಹಿಂದೂ, ಮುಸಲೀಂ, ಕ್ರೈಸ್ತ ಸಹೋದರರೇ, ದಯವಿಟ್ಟು ನನ್ನ ವಿಜ್ಞಾಪನೆಯನ್ನು ಶಾಂತ ಚಿತ್ತರಾಗಿ ಓದಿ ಸತ್ಯವನ್ನು ತಪ್ಪದೆ ಸನ್ಮಾರ್ಗದಿಂದ ನಡೆದುಕೊಳ್ಳುವಂತೆ ಜಗದೀಶನು ಅನುಗ್ರಹಿಸಲೆಂದು ನನ್ನ ಅಭಿನಯ ಪ್ರಾರ್ಥನೆ.

ಜೀವನ್ಮುಕ್ತರಾದ(ಮಹನೀಯ) ಮಹಾತ್ಮರು, ಸಚ್ಛಾಸ್ತ್ರಗಳು ಅಂದರೆ ವೇದ, ಖುರಾನ, ಬೈಬಲ್ಲುಗಳಲ್ಲಿ ಕಾಣಿಸಿರುವ, "ಅಹಿಂಸಾ ಪರಮೋ ಧರ್ಮಃ" ಎನ್ನುವ ಸತ್ಯವಾಕ್ಯನ್ನು ಅನುಸರಿಸಿ, ಈಗಿನ ಮಹನೀಯ ಮಹಾತ್ಮರು ತನು, ಮನ, ಧನವನ್ನೆಲ್ಲಾ ತ್ಯಜಿಸಿ ಅನೇಕ ಕಷ್ಟನಷ್ಟಗಳನ್ನು ಅನುಭವಿಸುತ್ತಾ, ವಿಧವಿಧವಾಗಿ ಬೋಧಿಸುತ್ತಾ ಬೀದಿ ಬೀದಿಗಳನ್ನು ಸಾರುತ್ತಾ ಇರುವುದನ್ನು ನಾವುಗಳು ಸದಾ ನೋಡುತ್ತಾ ಕೇಳುತ್ತಾ ಇದ್ದೇವೆ.

ಪ್ರಿಯ ಸಹೋದರರೇ, ಬನ್ನಿ ಬನ್ನಿ, ಮೇಲ್ಕಂಡ ಸತ್ಯವಾಕ್ಯನ್ನು ಚೆನ್ನಾಗಿ ವಿಂಗಡಿಸಿ, ಸದಾನಂದ ಸ್ನಾನ ಮಾಡುವ ತನ್ನ ಹಿತಾರ್ಥಕ್ಕಾಗಿ ಅನ್ಯಪ್ರಾಣಿಗಳಿಗೆ ಹಿಂಸೆ ಕೊಡದೇ, ಹತಗಳನ್ನು ಮಾಡದೆ ಇರುವುದೇ ಇಹ-ಪರಲೋಕಗಳ ಧರ್ಮವೆಂದು "ಅಹಿಂಸಾ ಪರಮೋಧರ್ಮಃ" ಎಂಬು

ವುದರ ಮುಖ್ಯ ತಾತ್ಪರ್ಯವಾಗಿದೆ. ಇದಕ್ಕೆ ವಿರುದ್ಧವಾಗಿ ನಡೆದುಕೊಳ್ಳುವ ಮನುಷ್ಯತ್ವವು ಕೇವಲ ನಿಷ್ಪ್ರಯೋಜನವಾದುದಲ್ಲವೇ?

ಶ್ಲೋಕ—ಶತಕೋಟಿ ಜನ್ಮ ಸುಮಾನುಷತ್ವಂ ದುರ್ಲಭಂ ||,

ಎಂಬುವಂತೆ ಭಗವತ್ ಸೃಷ್ಟಿಯಲ್ಲಿ ಸಕಲ ಪ್ರಾಣಿವರ್ಗದೊಳಗೆ ಮಾನುಷ್ಯ ವರ್ಗವೇ ಅತಿ ಶ್ರೇಷ್ಠವೆಂಬುವುದು ಸರ್ವರಿಗೂ ವೇದ್ಯವೇ ಇರುತ್ತದೆ. ಇದೂ ಅಲ್ಲದೆ—

ದುರ್ಲಭಂ ಮಾನುಷ್ಯ ಜನ್ಮಾನಾಂ ವಿವೇಕಿ ಅತಿ ದುರ್ಲಭಂ ||

ದುರ್ಲಭಂ ತತ್ವಜ್ಞಾನೀನಾಂ ||

ಎಂಬುವಂತೆ ಇಂಥಾ ದುರ್ಲಭವಾದ ಜನ್ಮವನ್ನು ಪಡಿದಿದ್ದಾಗ್ಯೂ ವಿವೇಕಿ ಮತ್ತು ಜ್ಞಾನಿಯೆನಿಸಿಕೊಳ್ಳುವುದು ಅತ್ಯಂತ ದುರ್ಲಭ. ಇವೆರಡಕ್ಕಿಂತಲೂ ತತ್ವಜ್ಞಾನಿಯೆಂಬುವ ಹೆಸರು ಪಡೆಯುವದು ಮಾತ್ರ ತ್ರಿಲೋಕದಲ್ಲಿಯೂ ದುರ್ಲಭವಲ್ಲವೆ?

ಭಾರತೀಯರೇ, ಪ್ರತಿ ಮನುಷ್ಯನು ಪುರುಷಾರ್ಥವನ್ನು ಹೊಂದತಕ್ಕದ್ದು; ಅಂದರೆ ತತ್ವಜ್ಞಾನಿಯಾಗತಕ್ಕದ್ದು ನಮ್ಮ ಸ್ವಧರ್ಮವಲ್ಲವೆ? ಇದಕ್ಕೆ ಒಂದನೇ ಅಂಗವು ನಮ್ಮ ಶರೀರವಲ್ಲವೆ?

"ಪರೋಪಕಾರಾರ್ಥಮಿದಂ ಶರೀರಂ" ಎಂಬುವಂತೆ ಪರಹಿತಚಿಂತೆಗಾಗಿ ನಮ್ಮ ಶರೀರವನ್ನು ಧಾರಿಯರದರಲ್ಲವೆ, ಮೋಕ್ಷಕಂಡ ಪುರುಷಾರ್ಥವನ್ನು ಹೊಂದುತ್ತ, ಮಹಾತ್ಮರ ಅನುಗ್ರಹಕ್ಕೆ ಪಾತ್ರರಾಗಿ ಜೀವನ್ಮುಕ್ತರನ್ನು ಕಾಣುತ್ತೇವೆ. ಇಲ್ಲವಾದರೆ "ಮನುಷ್ಯರೂಪೇಣ ಮೃಗಾಶ್ಚರಂತಿ" ಎಂಬುವಂತೆ ಪಶುವರ್ಗಕ್ಕೆ ಸೇರಿದವರೆನ್ನಲು ಸಂದೇಹವೇನಿದೆ?

ಪ್ರೀತಿಯುಳ್ಳ ಹಿಂದೂ ಮುಸಲೀಂ ಸಹೋದರರೇ, ಎಚ್ಚತ್ತು ನೋಡಿರಿ. ನಿದ್ರೆಸಂಪತ್ತಿನಲ್ಲಿ ಇರಿಸಿ ಮಹಾ ದುಃಖಸಮುದ್ರದೊಳ್ ಮುಳುಗಿಸುವ ಮೂಢೇವಿಯನ್ನು ಜಾಗ್ರತೆ ಓಡಿಸಿರಿ. ಸಹೋದರರೇ, ಇಲ್ಲಿ ನೋಡಿರಿ. ಮನುಷ್ಯತ್ವವನ್ನು ಸಾರ್ಥಕ ಪಡಿಸಲು ಮೂವರು ದಾತರು.

೧ ಮಹಾರಾಜರಾದ—ಆತ್ಮ.

೨ ಪ್ರಧಾನರಾದ—ಬುದ್ಧಿ.

೩ ಕಾರ್ಯಕರ್ತರಾದ—ಮನಸ್ಸು.

ಈ ತ್ರಿಮೂರ್ತಿಗಳು ವಾಸವಾಗಿರುವ ರಾಜ್ಯ ಅಂದರೆ, ಮಹಾಲ ನಮ್ಮ ಶರೀರವಲ್ಲವೇ? ಇಂಥ ದೇಹವನ್ನು ಆರೋಗ್ಯ ಮತ್ತು ಅಭಿವೃದ್ಧಿಯಲ್ಲಿ ಇಟ್ಟುಕೊಳ್ಳತಕ್ಕದ್ದು ಮೊದಲನೆಯದಾಗಿದೆ. ನಮ್ಮ ದೇಹಾಭಿವೃದ್ಧಿ ಆರೋಗ್ಯಕ್ಕೆ ಮುಖ್ಯ ಸಹಕಾರಿಗಳಾದ ನಾಯಕರು ಜಲಚರಿ, ಭೂಚರಿ, ಖೇಚರಿಗಳು ಇವುಗಳಿಂದ ಮನುಷ್ಯವರ್ಗಕ್ಕೆ ಆಗತಕ್ಕ ಉಪಕಾರ ಮತ್ತು ಸಹಾಯಗಳು:—

೧ ಜಲಚರಗಳು ಅಂದರೆ, ನೀರಿನಲ್ಲಿ ವಾಸಮಾಡತಕ್ಕ ಪ್ರಾಣಿಗಳು. ಮನುಷ್ಯದೇಹ ಅಭಿವೃದ್ಧಿ ಆರೋಗ್ಯಕ್ಕೆ ಜಲವು ಅಂದರೆ ನಿರ್ಮಲವಾದ ನೀರು ಅವಶ್ಯಕವಾಗಿದೆ. ಸದರಿ ಈ ನೀರಿನಲ್ಲಿ ಎಷ್ಟು ಕೊಳೆಕಲ್ಮಷಗಳು ಇದ್ದಾಗ್ಯೂ ಸೇವಿಸಿ, ನಮ್ಮ ದೇಹಕ್ಕೆ ವಿರೋಧವಿಲ್ಲದಂತೆ ನಿರ್ಮಲವಾದ ನೀರನ್ನು ಮಾಡುವದು ಎಲ್ಲರಿಗೂ ತಿಳಿದ ಅಂಶವಾಗಿದೆ.

೨ ಖೇಚರಗಳು—ಅಂದರೆ ರೆಕ್ಕೆಯುಳ್ಳ ಪಕ್ಷಿಗಳು. ಮಾನುಷ್ಯರ ಮನಸ್ಸು ತಾಪದಿಂದ ಸಂಕಟಪಡುತ್ತಾ ಚಂಚಲವಾಗಿರಲು ವನಾಂತರ ವಿಶ್ರಾಂತಿಗಾಗಿ ಹೋದಾಗ ಪಕ್ಷಿಗಳು ಚಿಕ್ಕ ಚಿಕ್ಕ ಪ್ರಾಣಿಗಳಾದಾಗ್ಯೂ ಕೋಮಲವಾದ ಕಂಠಧ್ವನಿಗಳಿಂದ ಕೂಗುತ್ತಾ ಹಾರಾಡುತ್ತ ನಮ್ಮ ಚಂಚಲವಾದ ಮನಸ್ಸನ್ನು ಆನಂದಪಡಿಸುವದು ಸರ್ವರಿಗೂ ಸಹಜವಾಗಿದೆ.

೩ ಭೂಚರಿಗಳು—ಅಂದರೆ ಪಶ್ವಾದಿ ವಗೈರೆ ಪ್ರಾಣಿಗಳು. ನೂರಾರು ಜನಗಳಿಗೆ ಅಸಾಧ್ಯವಾದ ಭಾರವನ್ನು ಹೊರುತ್ತಾ, ಎಳೆಯುತ್ತಾ ನಮಗೆ ಆಯಾಸವಿಲ್ಲದಂತೆ ನಮ್ಮ ದೇಹಕ್ಕೆ ನೋವು ಕೊಡದೆ ದೇಹಾಭಿವೃದ್ಧಿಗೂ ಮತ್ತು ಆತ್ಮ ಸಂರಕ್ಷಣೆಗೂ ಬೇಕಾದಷ್ಟು ಧಾನ್ಯಶಾಕಾದಿಗಳನ್ನು ಬೆಳೆಸಲು

ಮುಂದಾಳುಗಳಾಗಿರುವದು ಸರ್ವರಿಗೂ ತಿಳಿದ ವಿಷಯವೇ ಆಗಿರುತ್ತೆ. ಇವುಗಳಲ್ಲಿ ಕೆಲವು ಮೃಗಪ್ರಾಣಿಗಳು ಮನುಷ್ಯರ ಪೋಷಣೆಯಿಂದ ಸಹಾಯಮಾಡುತ್ತವೆ. ಇನ್ನೂ ಅನೇಕ ಮೃಗಪ್ರಾಣಿಗಳು ಭಗವನ್ನಿಯಾಮಕವಾದ ಆಹಾರವನ್ನು ಭುಂಜಿಸಿ, ಮನುಷ್ಯರ ಆರೋಗ್ಯಕ್ಕೂ ಮತ್ತು ಬಡಾವಣಿಗೆಗೂ ಅನೇಕ ವಿಧಗಳಿಂದ ಸಹಾಯಕರವಾದ ಉಪಕಾರಗಳನ್ನು ಮಾಡಿ ನಮ್ಮ ಆಯಾಸ ಕಷ್ಟ ನಷ್ಟಗಳನ್ನು ಹೋಗಲಾಡಿಸುವದು ಪ್ರತ್ಯಕ್ಷವಾಗಿದೆ. ಮನುಷ್ಯರ ಏಳಿಗೆಗೂ ಬಡಾವಣೆ ಮತ್ತು ಆರೋಗ್ಯಕ್ಕೂ ಯಾವ ಪ್ರಾಣಿಗಳು ಸಹಾಯಕಾರಿಗಳಾಗಿರುತ್ತವೋ ಆ ಪ್ರಾಣಿಗಳನ್ನು ಪೂಜನೀಯವಾಗಿ ಭಾವಿಸತಕ್ಕದ್ದು ಮನುಷ್ಯರ ಸತ್ಯಧರ್ಮವಲ್ಲವೆ?

ಪ್ರಾಣಿಗಳೊಳು ದಯವಿಡು ನೋಯಿಸಿದರೆ ನೋವಾಗುವುದದಕೆ| ಪ|
ಪ್ರಾಣದಮೇಲಿವುಗಳಿಗಿಹುದಾಸೆಯು ನಿನಗಿರುವಂದದಲಿ |ಅ| ಪ|
ಹಸಿವಾದರೇ ಬಾಯಾರಿಕೆಯಾದರೆ ಹೇಳಲು ಬಾಯಿಲ್ಲ |
ಹಸನಹ ಮೇವನು ನೀರನು ನೀಡುತ ಪಾಲಿಪುದವುಗಳನು ॥ ೧ ॥
ಉಳುವುವು ಹೊಲವನು ಕೊಡುವುವು ಹಾಲನು ಸೆಳೆವುವು ಗಾಡಿಯನು |
ಚಳಿಯನು ನೀಗುವ ಹೊದಿಕೆಯ ನೀವುವು ನಿಳಯುವ ಕಾಯುವುವು ॥೨॥
ದುಡಿದೀಪರಿಯೊಳು ನಮಗುಪಕಾರವ ಮಾಡುತಲನುದಿನವು |
ಬಿಡದೆಮ್ಮನೆ ನಂಬಿರುವುವುಗಳ ಪಾಲಿಸಬೇಡವೆ ಮುದದಿ ॥ ೩ ॥

ಮೇಲೆ ಉದಹರಿಸಿದ ನೀತಿಪದ್ಯಗಳನ್ನು ಸರ್ವರಿಗೂ ರೂಢಿಯಲ್ಲಿರುವ ಒಂದನೇ ಪುಸ್ತಕದಲ್ಲಿ ನೋಡಬೇಕಾಗಿ ಬೇಡುವೆ?

ಆತ್ಮ ಮಿತ್ರರೇ, ನೋಡಿದಿರಾ, ಶಾಂತಿಯುಳ್ಳ ದಯಾಳುತ್ವವು ಮತ್ತು ದೃಢಭಕ್ತಿಯುಳ್ಳ ವಿಶ್ವಾಸಗಳಿಂದ ಮೆರೆಯುವ ಭಾರತೀಯ ವರ್ತನ ಭೂಮಿಯು ಹೋಗಿ ಕಠಿಣವಾದ ನಿರ್ದಯದಿಂದಲೂ ಮತ್ತು ಕ್ರೂರವಾದ ಮೋಸದಿಂದ ಮೆರೆಯುವ ಹೆಣಗಳನ್ನು ತಿನ್ನುವ ರಾಕ್ಷಸ ವರ್ತನವುಳ್ಳ ರಕ್ತಮಯವಾದ ಭೂಮಿಯಾಗಿದೆ.

ಇದೂ ಅಲ್ಲದೆ, ನಮ್ಮ ಭರತಖಂಡದಲ್ಲಿ ಭಾರತೀಯರಿಗೆ ಮುಕ್ಕಾಲು ಭಾಗಕ್ಕಿಂತಲೂ ಹೆಚ್ಚಾಗಿ ವ್ಯವಸಾಯವು ಆತ್ಮ ಜೀವನೋಪಾಯವಾಗಿದೆ. ಸಹೋದರರೇ, ವ್ಯವಸಾಯಕ್ಕೆ ಒಂದನೆಯ ಅಂಗವು ಪಶು-ಪಕ್ಷಿಗಳು ಅಂದರೆ ಗೋವು, ಎಮ್ಮೆ, ಎತ್ತು, ಕುರಿ, ಕೋಣ, ಆಡು, ಕೋಳಿಗಳು. ಈ ಮೂಕಪ್ರಾಣಿಗಳ ಸಹಾಯವು ನಮಗಿಲ್ಲದಿದ್ದರೆ ಹೊಲಗಳು ಹಸನಾಗಲಾರವು. ಬೆಳೆಗಳು ಬೆಳೆಯಲಾರವು. ಧಾನ್ಯಾದಿಗಳು ಮನೆಗೆ ಬರಲಾರವು. ಹಾಲು-ಹೈನ, (ಅಮೃತವು) ಮೊದಲಿಗೇನೇ ಇಲ್ಲದಂತಾಗುವವು. ನಮ್ಮ ಆತ್ಮ ಪೋಷಣೆ ನಾಶವಾಗಿ ಮನುಷ್ಯತ್ವವು ಕ್ಷೀಣಿಸುವುದು. ಈ ವಿಚಾರವು ಎಲ್ಲರಿಗೂ ವೇದ್ಯವೇ ಇದೆ. ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತಲೂ ಹೆಚ್ಚಾಗಿದುಡಿದು, ನಷ್ಟ-ಕಷ್ಟಗಳನ್ನು ಹೋಗಲಾಡಿಸುವ ಅನಾಥಪ್ರಾಣಿಗಳ ಹಾಲು (ಅಮೃತ) ಗಳನ್ನು ಭುಂಜಿಸಿದ ಕೈಗಳಿಂದ ಕತ್ತಿಗೆ ಕೊಯಿದು ರಕ್ತದಿಂದ ಕತ್ತಿಗಳನ್ನು ತೊಳೆಯುವದು, ಮಾಂಸಾದಿಗಳನ್ನು ವಿಕ್ರಯಿಸುವುದು ಕಂದಾಯ-ಕಾಣಿಕೆಗಳನ್ನು ತೆಗೆದುಕೊಳ್ಳುವದು ಸಾವಿರಾರು ಪ್ರಾಣಿಗಳನ್ನು ಹಿಂಸಾಮಯದಿಂದ ಕತ್ತಿಗೆ ಕೊಯ್ಯಲು, ಕಮೇಲಾ ಅಂದರೆ ಕೊಲೆ-ಪಾತಕದಿಂದ ತುಂಬಿ ತುಳುಕುವ ಗೃಹಗಳನ್ನು ಕಟ್ಟಿಸಿ, ಹರಾಜು ಅಪ್ಪಣೆ ಚೀಟಿಗಳನ್ನು ಕೊಡುವುದು ಮಾನುಷ್ಯಧರ್ಮವೇ? ಇದಲ್ಲದೆ ಮತ್ಸ್ಯ ಅವತಾರ, ಕೂರ್ಮ ಅವತಾರ, ವರಾಹಾವತಾರ, ಬಸವೇಶ್ವರಾವತಾರ, ಗೋಮಾತೆ, ಒಂಟೆಯ ಅವತಾರ, ಎಂದು ಚಿತ್ರಪಟಗಳನ್ನು ಇಟ್ಟುಕೊಂಡು ಹೆಚ್ಚಿನ ಭಕ್ತಿಯಿಂದ ಪೂಜಿಸುವಿರಿ. ಮೇಲ್ಕಂಡ ಪ್ರಾಣಿಗಳನ್ನು ಪ್ರತ್ಯಕ್ಷವಾಗಿ ಕಂಡಕೂಡಲೆ ಹೆಚ್ಚಿದ ಕ್ರೂರತ್ವದಿಂದ ಕತ್ತಿಗೆ ಕೊಯಿದು ಭಕ್ಷಿಸುವಿರಿ. ನೋಡಿದಿರಾ ಮನುಷ್ಯತ್ವವು ರಾಕ್ಷಸರಿಗಿಂತಲು ಕಡೆಯಾಗುತ್ತಾ ಬಂತು. ಭಾರತೀಯರೇ, ವಿಚಾರವನ್ನು ಮಾಡಿ ಶಾಂತವನ್ನು ವಹಿಸಿ, ಅಂತಃಕರುಣೆಯನ್ನು ತೋರಿಸಿ ಮೂಕ ಪ್ರಾಣಿಗಳ ಪ್ರಾಣ ದಾನಗಳನ್ನು ಕೊಡಿ. ಪಶು-ಪಕ್ಷಿಗಳನ್ನು ಕೊಲೆ ಮಾಡಿ

ಮಾಂಸವನ್ನು ಭಕ್ಷಿಸುವುದರಿಂದ ಭಾರತೀಯರಿಗೆ ಆಗುವ ನಷ್ಟವನ್ನು ನೋಡಿರಿ.

ಒಳ್ಳೇ ಪುಷ್ಟಿಯುಳ್ಳ ಗೋವು ಒಂದಕ್ಕೆ ದಿನವೊಂದಕ್ಕೆ ಎಂಟುಸೇರು ಹಾಲು ಕರೆಯುತ್ತೆ. ಸಾಧಾರಣವಾದ ಗೋವು ದಿನಒಂದಕ್ಕೆ ಎರಡು ಸೇರು ಹಾಲು ಕರೆಯುತ್ತೆ. ಸರಾಸರಿ ಒಟ್ಟಿಗೆ ಗೋವು ದಿನಒಂದಕ್ಕೆ ಐದು ಸೇರು ಹಾಲು ಕರಿಯುವಂತೆ ನೇಮಕವಿದೆ. ಕೆಲವು ಗೋವುಗಳು ಒಂದು ವರುಷದ ವರೆಗೂ ಮತ್ತು ಕೆಲವು ಆರು ತಿಂಗಳ ವರೆಗೂ ಹಾಲು ಕರೆಯುತ್ತವೆ. ಒಟ್ಟಿಗೆ ಸರಾಸರಿ ಗೋವುಗಳು ಒಂದು ವರುಷ ಹಾಲು ಕರಿಯುತ್ತ ಇರುತ್ತವೆ. ಇದರಂತೆ ಒಂದೊಂದು ಗೋವು ಅದರ ಜೀವಿತ ಕಾಲದೊಳಗಾಗಿ ಕೊಡುವ ಹಾಲು ಸಾಧರಣವಾಗಿ ೧೨೩೦೦ ಮನುಷ್ಯರು ಒಂದಾವೃತ್ತಿ ತೃಪ್ತರಾಗಲು ಆಗುವಷ್ಟು ಆಹಾರವಾಗುತ್ತೆ. ಮತ್ತು ಒಂದು ಗೋವು ಅದರ ಜೀವಿತಕಾಲದೊಳಗಾಗಿ ನಾಲ್ಕು ಗಂಡುಕರ ನಾಲ್ಕು ಹೆಣ್ಣುಕರಗಳನ್ನು ಈಯುತ್ತದೆ. ಇದರೊಳಗೆ ಎರಡು ಸತ್ತು ಕೆಟ್ಟು ಹೋದಾಗ್ಯೂ ಆರು ಕರಗಳು ಉಳಿಯುತ್ತೆ. ಮೂರು ಹೆಣ್ಣುಕರಗಳು ಇವುಗಳ ಜೀವಿತಕಾಲಗಳೊಳಗಾಗಿ ೩೭೦೦೦ ಮನುಷ್ಯರುಗಳನ್ನು ತಮ್ಮ ಹಾಲಿನಿಂದ ತೃಪ್ತಿಪಡಿಸುತ್ತವೆ. ಮಿಕ್ಕ ಮೂರು ಗಂಡು ಕರಗಳು ಬೆಳೆದು, ಎತ್ತುಗಳಾಗಿ ಇವುಗಳ ಜೀವಿತಕಾಲಗಳೊಳಗಾಗಿ ೨೨೦೦ ಮಣಗಳ ಭಾರವುಳ್ಳ ಅನ್ನಕ್ಕೆ ಆಗುವ ಧಾನ್ಯಾದಿಗಳನ್ನು ಬೆಳೆಸಲು ಸಹಕಾರಿಗಳಾಗುವವು. ಈ ಅನ್ನವನ್ನು ಪ್ರತಿಯೊಬ್ಬನು ಮೂರು ಪಾವಿನಂತೆ ಭುಂಜಿಸಿದರೆ ೧೨೦೦೦ಜನರಿಗೆ ಆಹಾರವಾಗುತ್ತದೆ. ಇದರಂತೆ ಎರಡು ವರ್ಗದಿಂದ ಒಟ್ಟಿಗೆ ಸೇರಿಸಿ ನೋಡಲು ಒಂದು ಗೋವು ತನ್ನ ಅವಸಾನ ಕಾಲದೊಳಗಾಗಿ ೨೦೦೦೦೦ ಮನುಷ್ಯರನ್ನು ಒಂದಾವೃತ್ತಿ ತೃಪ್ತಿಪಡಿಸುತ್ತೆ. ಇದರಂತೆ ಸ್ವಲ್ಪ ಹೆಚ್ಚು ಕಡಿಮೆ (ಮಹಿಷಾ) ಅಂದರೆ ಎಮ್ಮೆ ಕೋಣಗಳು ಸಹ ಮೇಲ್ಕಂಡಂತೆ ತೃಪ್ತಿಪಡಿಸುತ್ತವೆ.

ಕುರಿ, ಮತ್ತು ಆಡುಗಳು ಇವುಗಳ ಜೀವಿತಕಾಲಗಳೊಳಗಾಗಿ ಸರಾಸರಿ ೨೦೦೦೦ ಮನುಷ್ಯರನ್ನು ತೃಪ್ತಿಪಡಿಸುವಷ್ಟು ಹಾಲನ್ನು ಕೊಡುತ್ತವೆ. ಆದ್ದರಿಂದ ಒಂದು ಗೋವು ಅಥವಾ ಒಂದು ಎಮ್ಮೆ, ಆಡು, ಕುರಿಯನ್ನಾಗಲಿ ಹತಮಾಡಿದರೆ ೨೦೦೦೦ ಮನುಷ್ಯರನ್ನು ಕೊಂದಪಾಪಕ್ಕೆ ಗುರಿಯಾಗುವುದಲ್ಲದೆ ಇಡೀ ಭರತಖಂಡದ ಕ್ಷೀಣತೆಗೆ ಕಾರಣ ಭೂತರಾಗುವರು.

ಯಾವಂತಿಹಿರೋಮಾಣಿ ಪಶುಪಾತಿ ಶುಭಾರತಃ |
ತಾವದ್ವರುಷ ಸಹಸ್ರಾಣಿ ಪತಂತಿ ನರಕೇಶುಚಾ ||

ಮಹಾಭಾರತ.

ಎಂಬುವಂತೆ ಯಾವ ಪ್ರಾಣಿಯನ್ನು ಹಿಂಸಿಸಿ ಹತಗಳನ್ನು ಮಾಡುವನೋ ಆ ಪ್ರಾಣಿಯ ಶರೀರದ ಮೇಲೆ ಇರುವ ರೋಮಗಳಷ್ಟು ಸಹಸ್ರ ವರ್ಷ ನರಕಯಾತನೆಯನ್ನು ಹೊಂದುತ್ತಾನೆ. ಸಹೋದರರೇ, ಮೇಲ್ಕಂಡ ಸತ್ಯವಾಕ್ಯಕ್ಕೆ ಗಮನಕೊಡಿ. ಬ್ಯಾಡಿ ಬ್ಯಾಡಿ ಪರಮಪವಿತ್ರವಾದ ಮಾನುಷ್ಯತ್ವವನ್ನು ನಾಶಪಡಿಸಬೇಡಿ. ಹಿಂಸಾಮಯವಾದ ಹತಗಳನ್ನು ಮಾಡದೆ ಹೆಣವುಳ್ಳ ಮಾಂಸಭಕ್ಷಣೆಯನ್ನು ಬಿಡಿ. ಮೇಲ್ಕಂಡ ಘೋರನರಕದಿಂದ ದೂರಾಗಿರಿ. ಉನ್ನತವಾದ ಜನ್ಮವನ್ನು ಸಾರ್ಥಕಪಡಿಸಿರಿ.

## ಸಿದ್ಧಾರೂಢಸ್ವಾಮಿ ಅಂತಃಕರುಣಮಸ್ತು.

ಸರ್ವ ಮಾನುಷ್ಯ ಮಹಾತ್ಮರಿಗೆ ನಿರಾಪರಾಧಿಗಳಿಂದ ದೀನ ಮೂಗ ಪ್ರಾಣಿಗಳ ವಿಜ್ಞಾಪನೆ ವ ಪ್ರಾರ್ಥನೆ.—( ಮತ್ಸ್ಯಾದಿಪ್ರಾಣಿಗಳು) ಅಯ್ಯಾ ಮಾನುಷ್ಯ ಮಹಾತ್ಮರೇ, ನಿಮ್ಮ ಶರೀರ ಒಡಾವಣಿಗೆಗೂ ಮತ್ತು ಆತ್ಮ ಸಂರಕ್ಷಣೆಗೂ ನಿರ್ಮಲವಾದ ಜಲವು ಬೇಕಾಗಿದೆ. ಸದರಿ ನೀರಿನಲ್ಲಿ ಎಷ್ಟು ಕೊಳೆಕಲ್ಮಷಗಳು ಇದ್ದಾಗ್ಯೂ ಅದನ್ನು ಭಕ್ಷಿಸಿ ನಿರ್ಮಲವಾದ ನೀರನ್ನು ನಿಮ್ಮ ಪಾನಕ್ಕೆ ವಿರುದ್ಧ ಇಲ್ಲದಂತೆ ಮಾಡುತ್ತೇವೆ. ನಮ್ಮ ಯೋಗ್ಯತಾನುಸಾರ ಸಹಾಯ ಮಾಡುವದನ್ನು ಕಂಡು ಕಾಂತದೃಷ್ಟಿ

ಯಿಂದ ನಮ್ಮನ್ನು ನೋಡದೆ, ಕ್ರೂರ ದೃಷ್ಟಿಯಿಂದ ನೋಡುವ ಮನುಷ್ಯರ ಕಠಿಣತ್ವವನ್ನು ನೋಡಿರಿ. ಕೋಳಿಕಲ್ಮಷಗಳನ್ನು ಭಕ್ಷಿಸಿ ಯಾರಿಗೂ ತೊಂದರೆ ಕೊಡದೆ ಬೆಳಸಿಕೊಂಡ ನಮ್ಮ ನೀಚವಾಸನೆಯುಳ್ಳ ಶರೀರವನ್ನು ಬೇಯಿಸಿ ತಿನ್ನುವ ಉದ್ದೇಶ್ಯವಾಗಿ ಬಲೆ-ಉರುಳ-ಗಾಣಗಳನ್ನು ಹಾಕಿ ಹಿಡಿದುಕೊಂಡು ಪ್ರಾಣವಿರಲಿಕ್ಕೆ ನಮ್ಮ ಮೈಮೇಲಿರುವ (ತುಬಟಿ) ಅಂದರೆ ಪೂರಿ ಹೋಗಲು, ಗರಗಳಕಲ್ಲಿನಮೇಲೆ ಹಾಕಿಕೊಂಡು ಉಜ್ಜುವಾಗ ಹಿಂಸೆಯನ್ನು ತಾಳಲಾರದೆ ನಮ್ಮ ದೇಹವೆಲ್ಲ ಉರಿಬಿದ್ದು ಅತಿಬಾಧೆಯನ್ನು ಪಡುತ್ತ ತಪ್ಪಿಸಿಕೊಳ್ಳಲು ಹಾರಿಬಿದ್ದರೆ ಸ್ವಲ್ಪವಾದರೂ ಕರುಣವಿಲ್ಲದೆ ನಮ್ಮನ್ನೂ ನಿಮ್ಮನ್ನೂ ಸಮಾನ ಭಾವದಿಂದ ನೋಡುವ ಪರಮೇಶ್ವರನ ಭಯವಿಲ್ಲದೆ ಕಠಿಣ ಚಿತ್ತನಾದ ರಾಕ್ಷಸಸ್ವಭಾವವುಳ್ಳ ಮನುಷ್ಯನು ಎತ್ತಿ ನೆಲಕ್ಕೆ ಅಪ್ಪಳಿಸಿ ಹೊಡಿಯುವದು. ಕತ್ತಿಯಿಂದ ಕಚಕಚನೆ ಕಡಿಯುವುದು, ಇದು ನಿಮಗೆ ಧರ್ಮವೆ? ಕೋಳಿಕಲ್ಮಷಗಳನ್ನು ಭಕ್ಷಿಸಿ ಬೆಳಸಿಕೊಂಡ ನಮ್ಮ ನೀಚವಾಸನೆಯುಳ್ಳ ಶರೀರದ ಮಾಂಸ ಭಕ್ಷಣೆ ಮನುಷ್ಯಶ್ರೇಷ್ಠರಿಗೆ ಹ್ಯಾಗೆ ಹಿತವಾಗುವುದು? ನೀಚವಾಸನೆಯುಳ್ಳ ನಮ್ಮ ಮಾಂಸ ಭಕ್ಷಕರನ್ನು ಘಾತಕರಾದ ಕಿರಾತರೆನ್ನಲು ಸಂದೇಹವೇನಿದೆ?

ಜಗದೀಶಾ ರಕ್ಷಿಸು! ರಕ್ಷಿಸು!! ಭಾರತೆಯರಿಗೆ ಶಾಂತಿಮನಸ್ಸನ್ನು ಕೊಡು.

## ವಿಶ್ವಾಸಮಸ್ತು.






ಗೋವು, ಎತ್ತು, ಕೋಣ, ಎಮ್ಮೆ, ಆಡು ಮತ್ತು ಕುರಿ ಇತ್ಯಾದಿ ಪ್ರಾಣಿಗಳ ವಿಜ್ಞಾಪನೆ.

ಗೋವು—ಅಯ್ಯಾ. ಸರ್ವ ಮೂಗಾಕ್ಕಪೋಷಕರಾದ ಮನುಷ್ಯ ಮಹಾತ್ಮರೆ, ಕ್ರೂರಮೃಗಗಳ ಭಯಕ್ಕೆ ಅರಣ್ಯವಾಸವನ್ನು ಬಿಟ್ಟು.

ನಮ್ಮನ್ನು ಪೋಷಿಸುವ ಮಾನುಷ್ಯ, ಆಶ್ರಮಶ್ರೇಷ್ಠವೆಂದು ನಂಬಿ ಭಗವನ್ನಿಯಾಮಕವಾದ ಹುಲ್ಲು ಸೆದೆ ಸೊಪ್ಪುಗಳನ್ನು ಮೇದು ನಿಮ್ಮ ಆಜ್ಞೆಗೆ ಒಳಪಟ್ಟು. ನಮ್ಮ ಶಕ್ತ್ಯನುಸಾರ ನಮ್ಮಿಂದ ಆಗುವ ಸಹಾಯಗಳನ್ನು ಹೊಂದುವರೀತಿ ಮತ್ತು ಕೊಂದು ತಿನ್ನುವ ವಿಧಾನವನ್ನು ನೋಡಿರಿ.

||ಪದ್ಯ||

ಇಟ್ಟರೆ ಕೆಗಣಿಯಾದೆ ತಟ್ಟಿದರೆ ಕುರುಳಾದೆ |
ತಟ್ಟಿದೇ ಹಾಕಿದರೆ ಮೇಲು ಗೊಬ್ಬರವಾದೆ |
ನೀನ್ಯಾರಿಗಾದೆಯೋ ಎಲೆ ಮಾನವ| ಹರಿಹರಗೋವುಗಳನ್ನು ||೧||
ಹಾಲಾದೆ ಕರೆದರೆ ಮೊಸರಾದೆ ಹೆಕ್ತ್ತರೆ |
ಮೇಲೆ ಕನೆಗಡೆದರೆ ಬೆಣ್ಣೆಯಾದೆ|
ಮೇಲಾದ ತುಪ್ಪವೆ ನಾನಾದೆ ಕಾಸಿದರೆ
ನೀನಾರಿಗಾದೆಯೋ ಎಲೆ ಮಾನವಾ | |೨|
ಉಳುವೆನಾ ಭೂಮಿಯನು ಹೊರುವೆನಾ ಹೇರನು |
ತುಳಿದು ಕಡ್ಡಿಯಕಾಳು ವಿಂಗಡಿಸುವೆ |
ಕಳವೆಯಾಗಿಹ ನೆಲವ ನಗುವ ಕೋಪನು ಮಾಳ್ಪೆ |
ನೀನಾರಿಗಾದೆಯೋ ಎಲೆ ಮಾನವ | |೩|
ಹಾದಿ ಬೀದಿಯಲ್ಲಿರುವ ಕಸದಹುಲ್ಲನ್ನು ಹುಡುಕಿ |
ಮೇದು ಮನೆಗೈದಿ ನಾನಾಮೃತವನೀವೆ |
ಅದನುಂಡು ನನ್ನಗೆರಡ ಬಗೆವ ಮಾನವ ಹೇಳು|
ನೀನಾರಿಗಾದೆಯೋ ಎಲೆ ಮಾನವ |

ಆತ್ಮಾ ಬುದ್ಧಿ ಮನಶ್ಶಕ್ತಿಯುಳ್ಳ ಮನುಜರೇ, ಮೇಲ್ಕಂಡ ಪದ್ಯವನ್ನು ಚನ್ನಾಗಿ ಓದಿ ತಿಳಿದುಕೊಳ್ಳಿರಿ. ಮತ್ತು ನಮ್ಮ ಸಗಣಿಯಿಂದ ಮನೆಗಳು ಶುಚಿಯಾಗುವವು. ಗೋಮೂತ್ರದಿಂದ ಗೃಹಗಳು ಪವಿತ್ರವಾಗುವವು. ಇದೂ ಅಲ್ಲದೆ ಅನೇಕ ರೋಗಗಳಿಗೆ ವೈದ್ಯವಾಗಿರುವದು.

ನಮ್ಮಿಂದ ಆಗತಕ್ಕ ಅನೇಕ ಉಪಕಾರಗಳನ್ನು ಹೊಂದಿ ಗೋವುಪೂಜೆ ಶ್ರೇಷ್ಠವೆಂದು ಮತ್ತು ಎತ್ತುಗಳನ್ನು ಬಸವೇಶ್ವರ, ನಂದೀಶ್ವರರೆಂದು, ನಿಮ್ಮ ಮನೆಯ ದೇವರೆಂದು ಭಾವಿಸಿ ಅನೇಕ ತರಗಳಿಂದ ಪೂಜಿಸುವಿರಿ. ಹಾಲು ಕೊಟ್ಟ ತಾಯಿಯನ್ನು ನಿಮ್ಮಿಂದ ಅಸಾಧ್ಯವಾದ ಕಷ್ಟಭಾರಗಳನ್ನು ಹೋಗಲಾಡಿಸಿ ಎತ್ತಿಕೊಂಡು ತಿರುಗಿದ ತಂದೆಯನ್ನು ಪೂಜನೀಯವಾದ ದೇವರನ್ನು ಎತ್ತಿ ನೆಲಕ್ಕೆ ಹಾಕಿ ನಾಲ್ಕು ಕಾಲುಗಳನ್ನು ಬಿಗಿದು ಉಸಿರಾಡದಂತೆ ಹಿಡಿದು ಕತ್ತಿನ ಮೇಲೆ ಕಾಲು ಇಟ್ಟು ಕತ್ತಿಗಳಿಂದ ಕುತ್ತಿಗೆ ಕೊಯ್ಯುವುದು ಕೊಯ್ಸುವದು, ಇದನ್ನು ಕಂಡು ಹರ್ಷದಿಂದ ಇರುವಿರಿ. ನಿಷ್ಪ್ರಾಣಿಗಳಾದ ನಮ್ಮನ್ನು ಕಟುಕರಿಗೆ ವಿಕ್ರಯಿಸುವುದು, ನಮ್ಮ ಮಾಂಸವನ್ನು ಬೀದಿಯಲ್ಲಿ ಇಟ್ಟು ಮಾರುವುದು, ಶ್ರೇಷ್ಠವುಳ್ಳ ಮನುಜ ಮಾಹಾತ್ಮರಿಗೆ ಇದು ಯೋಗ್ಯವೇ? ನಿಮ್ಮನ್ನು ನೆರೆನಂಬಿ ಆಶ್ರಯಿಸಿಕೊಂಡಿರುವ ಮೂಕಪ್ರಾಣಿಗಳ ಮೇಲೆ ತೋರುವ ಕರುಣೆ ವಿಶ್ವಾಸಗಳು ಎಲ್ಲಿ? ಅಯ್ಯಯ್ಯೋ! ವಿಶ್ವಾಸಘಾತಕರೆ!! ಶಿಲಾಮನಸ್ಸಿನ ಮನುಜರೇ, ಮಾತಾಪಿತೃ ದೈವದ್ರೋಹಿಗಳಾದ ಚಾಂಡಾಲರೆ, ಮೂಗಾತ್ಮಪೋಷಕರಲ್ಲದೆ, ಭಕ್ಷಕರಾದಿರಿ. ಮುಂದೆ ನಮ್ಮ ಗತಿ ಏನು? ಹೇ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಮಹೇಶ್ವರನೆ, ಮಾನುಷ್ಯತ್ವದೊಳ್ ಪ್ರವೇಶಿಸಿ ಇರುವ ರಾಕ್ಷಸತ್ವವನ್ನು ಛೇದಿಸು, ಛೇದಿಸು.

### ಅಂತಃಕರಣಮಸ್ತು

ಎಮ್ಮೆ ಕೋಣಗಳಾದ ನಾವು, ಮೇಲ್ಕಂಡ ಗೋವು ಮತ್ತೆ ಯತ್ತುಗಳ ವರ್ಗಕ್ಕೆ ಸೇರಿದವರು. ಮೇಲ್ಕಂಡಂತೆ ಸ್ವಲ್ಪಹೆಚ್ಚು ಕಡಮೆ ಹಾಲು, ಮೊಸರು, ಹೈನು, ಅಮೃತಗಳನ್ನು ಕೊಟ್ಟು, ಮಾನುಷ್ಯ ಶ್ರೇಷ್ಠರ ದೇಹಪುಷ್ಟಿಗೂ ಆತ್ಮಅಭಿವೃದ್ಧಿಗೂ ಪ್ರತ್ಯಕ್ಷ ಸಹಾಯಕಾರಿಗಳಾಗಿದ್ದೇವೆ. ಮತ್ತು ಗ್ರಾಮಬಡಾವಣೆಗೆಗೆ ನಿಮ್ಮ ಸರ್ವಸಂಪತ್ತಿಗೆ ಮುಂದಾಳುಗಳಾಗಿ

ಸಾಕುಮಕ್ಕಳಂತೆ ಒಪ್ಪುವ ನಮ್ಮ ನಾಶಪಡಿಸಿ ಬೇಯಿಸಿ ತಿನ್ನುವ ನೆವವನ್ನು ನೋಡಿರಿ.

ಗ್ರಾಮದೇವತೆ ಜಾತ್ರೆಯೇ ಅಲ್ಲವೆ, ಮೂಗಪ್ರಾಣಿಗಳ ಯಮದಂಡನೆಯಜಾತ್ರೆಯೆ? ನಿಮ್ಮ ಮನಸ್ಸಿಗೆಬಂದಂತೆ ದೇವಿದೇವತರು ಅಂದರೆ ಹೊನ್ನಕ್ಕಮ್ಮ, ಮಲ್ಲಕ್ಕಮ್ಮ ಮಸಿಯಮ್ಮ, ಮಶಾಣಮ್ಮ, ದುದಮ್ಮ ದುಗ್ಗಾಣಿಮ್ಮ, ಮಂಣಮ್ಮ. ಮಶಾಣಮ್ಮ ಅಲ್ಲದೆ ಈಗ ಹೊಸದಾಗಿ ಬಂದಿರುವ ಪ್ಲೇಗಮ್ಮ, ವಾಂತಿಮ್ಮ, ಗುದ್ದಮ್ಮ, ಇವರ ಅಂಣತಮ್ಮಂದಿರು ಅಂದರೆ ಕೆಂಚಪ್ಪ, ಬೀರಪ್ಪ, ಭೂತಪ್ಪ, ಪೀಡಪ್ಪ, ಪಿಶಾಚಪ್ಪ, ಎಂದು ಇಷ್ಟಬಂದಂತೆ ಹೆಸರುಗಳನ್ನು ಇಟ್ಟುಕೊಂಡು ಇವರ ಹೆಸರಿನ ಮೇಲೆ ನಮ್ಮನ್ನು ಬಿಡುವುದು ದೇವರ ಮಗು ಎಂತಲೂ ನಮ್ಮ ಗ್ರಾಮದ ಮಗು ಎಂದು ಅತಿಪ್ರೀತಿಯಿಂದ ಮೇಯಿಸಿ, ಪ್ರೇಮದಿಂದ ಕರೆದು ಹಗ್ಗಗಳಿಂದ ಬಿಗಿದು ಬೀದಿ ಬೀದಿ ಮೆರಿಸುತ್ತಾ ಮೇಲಿಂದ ಮೇಲೆ ಗುದ್ದುತ್ತಾ ಹೊಡಿಯುತ್ತ ಘೋರಹಿಂಸೆಯನ್ನು ಕೊಡುತ್ತ ನಾಲ್ಕುಕಡೆಗೆ ಎಳದಾಡುತ್ತ ಇರಲು ಹೊಡತಗಳಿಗೆ ತಾಳಲಾರದೆ, ನಿತ್ರಾಣಿಗಳಾಗಿ, ಬಿದ್ದು ಬಿದ್ದು ಏಳುವ ನಿರಪರಾಧಿ ದೀನಪ್ರಾಣಿಗಳಾದ ಕುರಿಕೋಣಗಳಾದ ನಾವುಗಳು ಅಂಬಾರೆಂದು ಅಂದರೆ ಹರಿಹರಬ್ರಹ್ಮಾ ಎಂದು ಅರಸಿನ ನೆಲಕ್ಕೆ ಬಿದ್ದರೆ ಮಾನುಷ್ಯ ಮುಖರಾಕ್ಷಸರು ಬಿಡದೇ ತೆಗೆದುಕೊಂಡು ಹೋಗಿ ಅತಿ ಧೀರರಂತೆ ಹರುಷದಿಂದ ಹಾರಾಡುತ್ತ ನಮ್ಮಂಥ ಅನಾದಿ ಪ್ರಾಣಿಗಳನ್ನು ಮೇಲ್ಕಂಡ ದೇವ ದೇವತೆಗಳ ಎದುರಿಗೆ ನಿಲ್ಲಿಸಿ ನಮ್ಮ ಕತ್ತುಗಳನ್ನು ಕತ್ತರಿಸಿ ಬಲಿಕೊಟ್ಟೆವೆಂದು ಕೂಗಾಡುವಿರಿ; ಮತ್ತು ನಿಮ್ಮ ಸರ್ವಸಂಪತ್ತಿಗೆ ಕಾರಣಭೂತರಾದ ಮಕ್ಕಳ ಮಾಂಸವನ್ನು ಬೆಯಿಸಿ ಕಠಿಣ ಹೃದಯರಾಗಿ ಕಿತ್ತಾಡುತ್ತ ತಿನ್ನುವಿರಿ.

ವಿಚಾರವಿಲ್ಲದೆ ಘೋರ ಹಿಂಸಾಮಯವಾದ ಇಂಥಾ ಕೃತ್ಯವು ಯಾವ ದೇವಿ-ದೇವತರಿಗೆ ಪ್ರೀತಿಯಾಗುವುದು! ಯಾವ ದೇವಿ-ದೇವತರಿಗಾ

ಗಲಿ, ನಮ್ಮಂಥ ಅನಾಥ ಮೂಕಪ್ರಾಣಿಗಳ ನಿಸ್ಸಾರವಾದ ನೀಚಮಾಂಸವು ಅರ್ಪಿತವಾಗಲಾರದು ಮತ್ತು ಬಲಿಯನ್ನು ಕೇಳಲಾರರು. ಸಾತ್ವಿಕ ಪದಾರ್ಥಗಳು ಅಂದರೆ ಹಣ್ಣು-ಹಂಪಲಗಳನ್ನು ಮತ್ತು ನೈವೇದ್ಯಕ್ಕೆ ನಿಷ್ಕಲವಾದ ಪಾಕಪದಾರ್ಥಗಳನ್ನು ಅರ್ಪಿಸಿಕೊಳ್ಳುವರು. ಹಾಗೆ ನಮ್ಮ ಮಾಂಸವನ್ನು ಭಕ್ಷಿಸಲು ಬಲಿಕೇಳಿದ ದೇವ-ದೇವತೆಯರು ಪ್ರತ್ಯಕ್ಷ ರಾಕ್ಷಸರಲ್ಲವೇ? ನಿಮ್ಮ ಸರ್ವ ಸಂಪತ್ತಿಗೆ ಮತ್ತು ನಿಮ್ಮಿಂದ ಅಸಾಧ್ಯವಾದ ಕಷ್ಟನಷ್ಟಗಳನ್ನು ಹೋಗಲಾಡಿಸುವ ಸಾಕುಮಕ್ಕಳನ್ನು ಬಲಿಕೊಡುವವರು ಪ್ರತ್ಯಕ್ಷ ಪಿಶಾಚರಲ್ಲವೇ? ಓ ಗ್ರಾಮಾಧಿಪತಿಗಳೇ ಮತ್ತೆ ಇದಕ್ಕೆ ಉನ್ನತವಾದ ಅಧಿಕಾರಗಳನ್ನು ವಹಿಸಿದ ಮಹನೀಯರೇ, ಮೇಲ್ಕಂಡ ಮೂಕಪ್ರಾಣಿಗಳ ಯಮದಂಡನೆಜಾತ್ರೆಗೆ ಅಪ್ಪಣೆ ಚೀಟಿಗಳನ್ನು ಕೊಟ್ಟು ಕೊಲೆ-ಪಾತಕದಿಂದ ತುಂಬಿದ ಹಬ್ಬವನ್ನು ಮಾಡಿಸುವುದರಲ್ಲಿ ಜಾತ್ರೆ ಮಾಡಿದ ಗ್ರಾಮಕ್ಕೂ ಮತ್ತು ಭಾಂತೇಯರಿಗೂ ಎಷ್ಟು ಸೌಖ್ಯವು ಲಭಿಸುವುದು ನೀವೇ ತಿಳಿದು ನೋಡಿರಿ. ಈಗಲೇ ಪಶುಪಕ್ತದಿಂದ ಹೊರಟು ಹೋದ ಮಾನುಷ್ಯತ್ವವೇ ಹಾಯ್! ಹಾಯ್!! ಎಂಥ ಮೂಢತ್ವವನ್ನು ವಹಿಸಿಕೊಂಡು ನರಕಪ್ರಾಪ್ತಿ ಮಾಡಿಕೊಳ್ಳುವಿ. ನಿಲ್ಲು ನಿಲ್ಲು, ವಿಚಾರವನ್ನು ಮಾಡು. ನಿನ್ನ ಸರ್ವ ಸಂಪತ್ತನ್ನೂ ನಾಶಪಡಿಸಿಕೊಂಡು ಇಹ ಮತ್ತು ಪರಲೋಕ ಭ್ರಷ್ಟನಾಗಬೇಡ. ಎಚ್ಚರಿಕೆ, ಎಚ್ಚರಿಕೆ. ನಿಮ್ಮನ್ನೂ ನಮ್ಮನ್ನೂ ಸಮಭಾವದಿಂದ ನೋಡುವ ಪರಮೇಶ್ವರನ ಪ್ರೀತಿಗೆ ಪಾತ್ರನಾಗು.

**ಆರ್ತಕನಿಕರಮಸ್ತು| ದಯಾಳುತ್ವಮಸ್ತು|**

**ಮಹಾತ್ಮಾಗಾಂಧಿಜೈಮಸ್ತು.**

ಕುರಿ, ಆಡು, ಮತ್ತು ಮೇಕೆಗಳ ವಿಜ್ಞಾಪನೆ.

ಅಯ್ಯಾ, ಪುರುಷಾರ್ಥವನ್ನು ಹೊಂದತಕ್ಕ ಪುರುಷೋತ್ತಮರೇ,

ಕುರಿಗಳಾದ ನಾವು ವರುಷಕ್ಕೆ ಒಂದೆರಡಾವರ್ತಿ ನಮ್ಮ ಮೇಲಿನ ತುಬುಟ
ವನ್ನು ಕೊಟ್ಟು ಘೋರವಾದ ಛಳಿ-ಗಾಳಿ, ಶೀತದಿಂದ ನಿಮ್ಮನ್ನು ತಪ್ಪಿಸು
ವದಲ್ಲದೆ ನಮ್ಮ ಯೋಗ್ಯತಾನುಸಾರ ಹಾಲನ್ನು ಕೊಡುತ್ತೇವೆ. ಇದೂ
ಅಲ್ಲದೆ ಧಾನ್ಯಶಾಕಾದಿಗಳನ್ನು ಬೆಳೆಸಲು ನಮ್ಮ ಗೊಬ್ಬರವು ಅತಿ ಶ್ರೇಷ್ಠ
ವಾಗಿ ಉಪಯೋಗಿಸಿಕೊಳ್ಳುತ್ತೀರಿ. ಇದರಂತೆ ಮೇಕೆ ಅಥವಾ ಆಡುಗ
ಳಾದ ನಾವು ಕುರಿಗಳಿಗಿಂತಲೂ ಹೆಚ್ಚಾಗಿ ಹಾಲನ್ನು ಕೊಡುತ್ತೇವೆ.
ನಿಮ್ಮ ಮಕ್ಕಳ ಚಿಕ್ಕಂದಿನಲ್ಲಿ ಹೆತ್ತ ತಾಯಂದಿರುಗಳು ಸ್ವರ್ಗಸ್ಥರಾದರೆ
ಸದರಿ ಮಕ್ಕಳ ಹಾಲಿಗಾಗಿ ಮಲತಾಯಿಯಂತೆ ಭಾವಿಸಿ ನಮ್ಮನ್ನು ಉಪ
ಯೋಗಿಸಿ ಕೊಳ್ಳುತ್ತೀರಿ. ಅವಸರ ಕಾಫಿ, ಚಹಾ ನಿಮಿತ್ತವಾಗಿ ನಮ್ಮನ್ನು
ಕಂಡಲ್ಲಿ ಹಾಲು ಕರೆದುಕೊಳ್ಳುತ್ತೀರಿ. ಇಂಥಾ ಉಪಕಾರ ಮತ್ತು
ಸಹಾಯಕರಾದ ಮೂಗಪ್ರಾಣಿಗಳನ್ನು ಮಾಡುವ ಹಿಂಸಾಮಯವಾದ
ಹಠಗಳನ್ನು ನೋಡಿರಿ. ಶಾಂತಮನಸ್ಸಿನಿಂದ ಅತಿ ವಿಶ್ವಾಸ ದಯಾಳುತ್ವ
ವನ್ನು ತೋರಿಸುತ್ತಾ ನಮ್ಮಿಂದ ಅಗತಕ್ಕ ಉಪಕಾರಗಳನ್ನು ತೆಗೆದುಕೊ
ಳ್ಳುತ್ತ ನಮ್ಮ ನಿಸ್ಸಾರವಾದ ಹೆಣವುಳ್ಳ ಮಾಂಸವನ್ನು ತಿನ್ನುವ ಉದ್ದೇ
ಶ್ಯವಾಗಿ ಕೊಡಲೆ ವಿಶ್ವಾಸ ದಯಾಳುತ್ವನಾಶಕರಾಗಿ ಸ್ವಲ್ಪಾದರೂ ನಮ್ಮ
ಉಪಕಾರವನ್ನು ನೆನೆಸದೆ ಕಠಿಣಚಿತ್ತರಾಗಿ ಕಲ್ಲುಮನಸ್ಸು ಮಾಡಿಕೊಂಡು
ಎತ್ತಿ ನೆಲಕ್ಕೆ ಹಾಕುವಿರಿ. ಬ್ಯಾ, ಅಂದರೆ ಭಾರತೀಯರೇ ಎಂದು
ಕೂಗಲು ಬಿಡದೇ ಕರಕರನೆ ಕುತ್ತಿಗೆ ಕೊಯ್ಯುವಿರಿ. ಇಂಥ ಪುರುಷರು
ಭಾರತೀಯರೇ ಅಲ್ಲದೇ ಹೆಣಗಳನ್ನು ತಿನ್ನುವ ಪ್ರತ್ಯಕ್ಷ ಪಿಶಾಚರೇ.
ಅಯ್ಯಾ ಪುರುಷೋತ್ತಮರೇ, ನಿಮ್ಮ ಶ್ರೇಷ್ಠವಾದ ದೇಹಕ್ಕೆ ಶೀತ, ಗಾಳಿ,
ಛಳಿ ಸೋಂಕದಂತೆ ಆರೋಗ್ಯವಾಗಿ ಸದಾ ಬೆಚ್ಚಗೆ ಇರಲಿ ನನ್ನ ದೇಹದ
ಮೇಲಿರುವ ತುಬುಟವನ್ನು ಕೊಟ್ಟು ಕಂಬಳಿ, ಶಾಲು, ಟ್ವೀತುಕೋಟುಗ
ಳನ್ನು ಹೊದಿಸಿದ ತಂದೆಭಾವನೆಯುಳ್ಳ ಕುರಿ ನಾನಲ್ಲವೇ? ಇಂಥ ಉಪಕಾ
ರಿಯಾದ ತಂದೆಯನ್ನು ನಾಶಪಡಿಸಿಕೊಳ್ಳುವವರು ನೀವು ಯಾರು? ನಿಮ್ಮ

ಶ್ರೇಷ್ಠವಾದ ಆತ್ಮ ಪೋಷಣೆಗಾಗಿ ನನ್ನ ದೇಹದೊಳಭಾಗದ ಹಾಲನ್ನು ಕೊಟ್ಟು ನಿಮ್ಮನ್ನೂ ನಿಮ್ಮ ಮಕ್ಕಳನ್ನೂ ರಕ್ಷಿಸಿದ ತಾಯಿ ಆದ ಆಡು ನಾನಲ್ಲವೇ? ಇಂಥ ಆಪತ್ ಬಂಧುಗಳು ಮತ್ತು ತಾಯಿ-ತಂದೆ ಸಮಾನ ರಾದ ನಮ್ಮನ್ನು ಕುತ್ತಿಗೆ ಕೊಯ್ಯುವದು ಹಾಲು ಕುಡಿದ ಕೆಚ್ಚಲನ್ನು ಸುಟ್ಟುಕೊಂಡು ತಿನ್ನುವದು, ರಕ್ತದಿಂದ ಕತ್ತಿಗಳನ್ನು ತೊಳೆಯುವವರು ನೀವು ಯಾರು? ನಿಮ್ಮ ಪೋಷಣೆಯಿಂದ ನಾವು ನಿಮ್ಮಗೆ ದತ್ತು ಸಂತಾನ ವಾಗಲಿಲ್ಲವೋ, ಸಾಕುಮಕ್ಕಳೆಂದರೆ ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕ ಳಿಗಿಂತಲೂ ಹೆಚ್ಚಾಗಲಿಲ್ಲವೋ? ಇಂಥಾ ಬಾಯಿಯಿಲ್ಲದ ಅತಿ ಸಾಧುಗಳಾದ ಮೂಕಮಕ್ಕಳನ್ನು ನಿಮ್ಮ ನೆಂಟರು ಇಷ್ಟರು ಸೇರಿದಾಗಲೋ, ಅಲ್ಲದೆ, ನಿಮ್ಮ ತಾಯಿ ತಂದೆಯವರು ತೀರಿದ ದಿನಗಳು ಅಂದರೆ (ಸ್ವರ್ಗಸ್ಥರಾದ) ದಿನಗಳಿಗಾಗಿ ಅಂದರೆ ಪಿತೃಪಕ್ಷಗಳಿಗೂ ಮತ್ತು ನಿಮ್ಮ ಮನಸ್ಸಿಗೆ ಬಂದಂತೆ ಕಲ್ಪಿಸಿಕೊಂಡ ದೇವರಿಗೂ, ಬಲಿಕೊಡುವ ಉದ್ದಿಶ್ಯವಾಗಿ ಅತಿ ವಿಶ್ವಾಸ ದಿಂದ ಬಾ, ಬಾ, ಎಂದು ಕರೆದು ಕಾಲುಗಳನ್ನು ಬಿಗಿದು ಹಿಡಿದು ಮೈಯೆಲ್ಲಾ ಹಿಚುಕಿ ನೋಡುತ್ತಾ ನಗುನಗುತ್ತಾ ಹೆಗಲಮೇಲೆ ಹೊತ್ತು ಕೊಂಡು ಹೋಗುವದು ಪುನಹ ಎತ್ತಿ ನೆಲಕ್ಕೆ ಹಾಕಿ ಕುತ್ತಿಗೆಯ ಮೇಲೆ ಕತ್ತಿ ಇಟ್ಟು ಕರಕರನೆ ಕೊಯ್ಯುವಾಗ ದಿಕ್ಕಿಲ್ಲದ ಅನಾದಿಗಳು ಅಂಬಾಯೆಂದು ಕೂಗಲೂ ಬಿಡದೆ ಮತ್ತೊಬ್ಬ ಹಂತ್ಯಕನು, ನಮ್ಮ ಬಾಯಿಯಲ್ಲಿ ನೀರು ಬಿಡುತ್ತಾ, ಕೈಕಾಲು ಆಡದಂತೆ ಬಿಗಿದು ಹಿಡಿ ಯುವನು. ನಂಬಿದ ಮಕ್ಕಳನ್ನು ಹಾಳುಮಾಡುವ ಮೂರ್ಖಮನುಜನೇ, ನೀನು ಸುಖವಾಗಿರಲು ನಾನು-ನೀನು ಎಂದು ಬರುವ ನೆಂಟರಿಗಾಗಿ ಜಗತ್ಸ ಹಾಯಕರಾದ ನಮ್ಮನ್ನು ನಾಶಪಡಿಸಿ, ಜಗದೀಶನ ಪ್ರೀತಿಗೆ ಕ್ರೂರನಾಗ ಬೇಡ. ಮತ್ತು ಪಿತೃಪಕ್ಷಗಳೆಂದು ಮನೆ ಮಠಗಳನ್ನು ಶುದ್ಧಪಡಿಸಿಕೊಂಡು ಸ್ನಾನಸಂಧ್ಯಾವಂದನೆಗಳಿಂದಲೂ ಮತ್ತು ಒಂದೊತ್ತು ಉಪವಾಸಗಳಿಂ ದಲೂ ಶುದ್ಧವಾಗಿದ್ದು, ನಿಮ್ಮ ದತ್ತುಮಕ್ಕಳ ಕುತ್ತಿಗೆ ಕೊಯಿದು, ರಕ್ತ

ಮಾಂಸ ನರಕಗಳಿಂದ ತುಂಬಿದ ನಮ್ಮ ಶರೀರವನ್ನು ಬೇಯಿಸಿ ನಿಮ್ಮ ಪಿತೃಗಳಿಗೆ ಅರ್ಪಿಸಿ ರಾಕ್ಷಸರಂತೆ ತಿನ್ನುತ್ತಾ ತಿನ್ನುವಿರಲ್ಲಾ? ಎಲ್ಲಿ ನಿಮ್ಮ ಶುದ್ಧವಾದ ಆಚಾರವು? ಶಾಂತವುಳ್ಳ ದಯಾಳುತ್ವವು? ವಿಶ್ವಾಸ ನಂಬಿಕೆಗಳೂ ಎಲ್ಲಿ ಹೋದವು? ಛಿ, ಛಿ. ನಂಬಿದ ಮಕ್ಕಳ ಕುತ್ತಿಗೆ ಕೊಯ್ಯುವ ಕೊಲೆಪಾತಕರು, ಮತ್ತು ಮೂಕಪ್ರಾಣಿಗಳ ಪ್ರಾಣತೆಗೆಯುವ ಚಾಂಡಾಲರು ನೀವಲ್ಲದೆ ಇನ್ಯಾರು? ನೀವೇ ತಿಳಿದು ನೋಡಿರಿ. ಇದೂ ಅಲ್ಲದೆ ಸಾಕ್ಷಾತ್ ಭಗವಂತನಾದ ಶ್ರೀ ಹರಿಯನ್ನು ಮೇಲ್ಕಂಡ ಘೋರ ಕೃತ್ಯದೊಳಗೊಳಪಡಿಸುವ ಹರಿದಾಸರೆಂದು ಹೆಸರು ಇಟ್ಟುಕೊಂಡು, ಹರಿಸೇವೆ ಮಾಡುವ ನೀಚಮನುಜರ ಕೆಟ್ಟಕೃತ್ಯಗಳನ್ನು ನೋಡಿರಿ, ಮತ್ತು ಪದಾರ್ಥಗಳನ್ನು ಸೇವಿಸಿ ಪ್ರಜ್ಞೆಯನ್ನು ತಪ್ಪಿ ಜ್ಞಾನವಿಲ್ಲದೆ ನಮ್ಮನ್ನು ಹಿಡಿದುಕೊಂಡು ಕುತ್ತಿಗೆಕೊಯ್ಯುವ ಚಾಂಡಾಲಮಂತ್ರವನ್ನು ಜಪಿಸಿ ಬಾಯಲ್ಲಿ ನೀರುಬಿಡುತ್ತ ನಮ್ಮ ಶಿರಗಳನ್ನು ಛೇದಿಸುವಿರಿ, ಮತ್ತು ಗೋವಿಂದಾ ಎಂದು ಕೂಗುತ್ತ ಶಂಖ, ಜಾಗಟೆಗಳನ್ನು ಬಾರಿಸುವಿರಿ. ಹರಿ ಹರಿ ಇದುಯಾವ ಧರ್ಮ? ನಮ್ಮ ನಿಸ್ಸಾರವಾದ ಹೆಣವುಳ್ಳ ಮಾಂಸವನ್ನು ಬೇಯಿಸಿ ಶಂಖ ಚಕ್ರದಿಂದ ಒಪ್ಪುವ ಗಿರಿಧರನಿಗೆ ಅರ್ಪಿಸುವಿರಿ! ಹರ ಹರ ಇದು ಯಂಥಾ ಶಾಸ್ತ್ರ? ಶ್ರೀ ಹರಿಯು ನಮ್ಮಂಥ ಅನಾದಿ ದೀನಪ್ರಾಣಿಗಳನ್ನು ಹೆಚ್ಚಿನ ಹಿಂಸೆಕೊಟ್ಟು ನಾಶಪಡಿಸಿದ ರಾಕ್ಷಸರನ್ನು ಸಂಹರಿಸಲು ಚಕ್ರಧಾರಿಯಾಗಿ ಅವತರಿಸಿ ಅನೇಕ ನೀಚರಾಕ್ಷಸರನ್ನು ಕೊಂದು ಜಗತ್ತನ್ನು ಉದ್ಧರಿಸಿದ ಪರಮಾತ್ಮನಿಗೆ ಮೇಲ್ಕಂಡ ನೀಚಕೃತ್ಯಗಳು ಹ್ಯಾಗೆ ಅರ್ಪಿತವಾಗುವವು. ಪೂರ್ವದಲ್ಲಿ ಮಹನೀಯ ಮಹಾತ್ಮರಾದ ಯತಿಗಳನ್ನು ಹಿಂಸಿಸಿದ ಘಾತಕ ರಾಕ್ಷಸರಿಗೂ ಈಗಿನ ಮೂಗಾತ್ಮಕರಾದ ದೀನಪ್ರಾಣಿಗಳನ್ನು ಹಿಂಸಿಸಿ ಕೊಂದು ಬೇಯಿಸಿ ತಿನ್ನುವ ಮಾನುಷರಿಗೂ ಭೇದವೇನಿದೆ? ಸಾಧು ಪ್ರಾಣಿಗಳ ಮರೆಯನ್ನು ಕೇಳಿ ಬ್ರಹ್ಮಾಂಡನಾಯಕನು ಅವತರಿಸಿ, ಇಂಥಾ ಕೊಲೆಪಾತಕರನ್ನು ಸಂಹರಿಸಲು ಸಂದೇಹವೇನಿದೆ? [illegible]

ದೆಬಟ್ಟರೆ ಪ್ಲೇಗು ಮಾರ್ಕಾದಿಗಳು ಹಿಂಸಿಸುವವು.

## ಮನುಷ್ಯಮಹಾತ್ಮರೇ,

## ಪ್ರಾರ್ಥನೆ.

೧ ಅಯ್ಯಾ ಮಹನೀಯರೇ, ನಿರ್ನಿಮಿತ್ತವಾಗಿ ನಮ್ಮಗಳನ್ನು ಹಿಂಸಾ ಮಾಡುವದರಿಂದ ನಿಮಗೆ ಮಹತ್ಪಾಪ ಬಂದಿಲ್ಲ ಅಂತ ನೀವು ಚನ್ನಾಗಿ ತಿಳಿದುಕೊಂಡು ಇರಬಹುದು. ನಾವುಗಳು ಮೂಕಪ್ರಾಣಿಗಳಾದಾಗ್ಯೂ ನಿಮಗೆ ಬಂದಿರುವ ವಿಪತ್ತುಗಳನ್ನು ಬಲ್ಲೆವು ನೀವು ಜ್ಞಾನಿಗಳಾಗಿ ಬುದ್ಧಿ ಇದ್ದವರಾಗಿದ್ದೂ ಸಹಾ ನಮ್ಮಗಳ ಹತ ವಿಷಯದಲ್ಲಿ ನಿಮ್ಮಗಳಿಗೆ ವೈರಾಗ್ಯ ಹುಟ್ಟುವದಿಲ್ಲವಲ್ಲ, ದೇವರು ನಿಮಗೂ ನಮಗೂ ಒಂದೇ ಸಮ.

ದೇವರ ಕಾರ್ಯವೇನಂದರೆ, ಸಜ್ಜನರನ್ನು ರಕ್ಷಿಸೋಣ ದುರ್ಜನರನ್ನು ಶಾಸನ ಮಾಡೋಣ ಇದು ಆತನ ಕೆಲಸವಾಗಿದೆ.

ದುಷ್ಟ ಪ್ರಾಣಿಗಳು ಆದ ನೀವು ಸಜ್ಜನರಾದ ನಮ್ಮಗಳನ್ನು, ಹಿಂಸೆ ಮಾಡುವದರಿಂದ ನಿಮಗೆ ಪದೆ ಪದೆ ವಿಪತ್ತುಗಳು ಬಂದು ಊರು ಬಿಡುವದು ಹೆಂಡಿರು ಮಕ್ಕಳನ್ನು ಕಳೆದುಕೊಳ್ಳುವದು, ನಿಮ್ಮಗಳ ಆಸ್ತಿಗಳನ್ನು ಅನ್ಯಜನಕ್ಕೆ ಕೊಡವುದು, ಇದು ವಿಪತಲ್ಲವೇ? ಈ ವಿಪತ್ತು ನಿಮಗೆ ಪದೆ ಪದೆ ಸಂಭವಿಸುವದಿಲ್ಲವೇ? ಇದು ನಿಮ್ಮ ಪಾಪದಿಂದ ಬಂದದ್ದು.

ಪ್ಲೇಗಿನ ಸಂಬಂಧ

೨ ಇನ್‌ಪ್ಲೂಯಿಂಜಾ—ಬೇರೆ ನೋಡಿರಿ—

ಹೊಸದಾಗಿ ನಿಮ್ಮಗಳ ಪಾಪದಿಂದಲೇ ಈ ಬೇನೆ ನಿಮಗೋಸ್ಕರವೇ ಹುಟ್ಟಿದುದಾಗಿದೆ.

ಇದರಿಂದ ಈ ಭರತಖಂಡದಲ್ಲಿ ೧೦ ರಲ್ಲಿ ೧ ಭಾಗ ಜನ ಸವೆದರೂ ಇನ್ನೂ ನೀವು ಹಿಂಸಾಕಾರ್ಯವನ್ನು ಬಿಡುಲೊಲ್ಲಿರಿ.

ದೇವರು ನಿಮಗೋಸ್ಕರ ಭೂಲೋಕಕ್ಕೆ ಕಳುಹಿಸಿರುವ (ಪ್ಲೇಗ್

ಇನ್‌ಫ್ಲೂಎಂಜಾ, ಕಾಲರಾ) ಮೂರು ವಿಪತ್ತುಗಳು ಅಂತಾ ತಿಳಿಯಬೇಡಿರಿ.—

ಪಶುಗಳಾದ ನಮ್ಮಗಳ ಮಧ್ಯದಲ್ಲಿ ಅತಿಶ್ರೇಷ್ಠವಾದ ಪರಮಪವಿತ್ರವಾದ ಗೋವನ್ನು ಕೂಡಾ ದೇವರೇ ಸೃಷ್ಟಿಸಿ ಇದ್ದಾನೆ. ನೀವು ಅದನ್ನು ಕೂಡಾ ಕೊಂದು ತಿನ್ನುವದರಲ್ಲಿ ನಿಮ್ಮಗಳಿಗೆ ಎಷ್ಟು ಸಂತೋಷವಾಗತ್ತೋ ಹಾಗೆಯೇ ನಿಮ್ಮಗಳ ಹಿಂಸಾವಿಷಯದಲ್ಲಿ ದೇವರಿಗೆ ಅಷ್ಟೇ ಸಂತೋಷವಾವಾದೀತೆಂದು ನೀವು ಯಾಕೆ ತಿಳಿಯಲೊಲ್ಲಿರಿ.

ದೇವರು ಅಂದರೆ ಸರ್ವರಿಗೂ ಸಮಎಂದು ತಿಳಿದುಕೊಳ್ಳಿರಿ. ಪಾಪಿಗಳ ನಾಶಕ್ಕೂ ಸಜ್ಜನರ ಕ್ಷೇಮಕ್ಕೂ ದೇವರು ಇದ್ದಾನೆ. ದೇವರನ್ನು ಸ್ಮರಣೆಮಾಡಿ ನಮ್ಮಗಳಿಗೆ ಶಾಸನದ ಗುರ್ತು ಎಂದು ತಿಳಿದುಕೊಂಡು ಮುಂದೆ ಆದರೂ ಕ್ರೌರ್ಯವನ್ನು ಬಿಟ್ಟು ಸರ್ವಪಶುಗಳನ್ನು ನಿಮ್ಮ ಮಕ್ಕಳಂತೆ ಭಾವಿಸಿದರೆ ದೇವರು ನಿಮಗೆ ಕಲ್ಯಾಣ ಮಾಡುತ್ತಾನೆ.

ಈ ಬೋಧನೆಯು ನಿಮ್ಮಗಳಿಗೆ ಮನುಷ್ಯರು ಮಾಡಬಹುದೆಂದ ತಿಳಿದು ಈ ದಿನದ ವರಿಗೂ ಸಹನಮಾಡಿದೆವು. ಈ ಭೂಮಿಯಮೇಲಿನ ದೊಡ್ಡವರು ಯಾರೂ ನಿಮಗೆ ಬೋಧನೆಮಾಡಲಿಲ್ಲವೆಂದು ಕಾಣುತ್ತೆ. ಹಾಗೆ ಮಾಡಿದ್ದರೆ ನೀವು ಹಿಂಸಾಕಾರ‍್ಯಕ್ಕೆ ಬೀಳುತ್ತಿರಲಿಲ್ಲ. ನೀವು ಬುದ್ಧಿಯುಳ್ಳ ಪ್ರಾಣಿಗಳು; ನಾವು ಬುದ್ಧಿಹೀನರು; ದೇವರು ನಿಮಗೆ ಬುದ್ಧಿಜ್ಞಾನ ಕೊಟ್ಟದ್ದು ವ್ಯರ್ಥವಾಯಿತು, ಎಂತ ತಿಳಿಯುತ್ತೆ. ನಮ್ಮಂಥ ಪಶುಗಳಿಂದ ಆದ ಉಪದೇಶವೇ ನಿಮ್ಮಗಳಿಗೆ ನರಕ ಭಯವನ್ನು ತಪ್ಪಿಸಬಹುದು. ಇಷ್ಟೇ ಅಲ್ಲ ದೇವರು ನಿಮಗೆ ಕೊಟ್ಟವಿಪತ್ತು ೩ ಅಲ್ಲ. ಪ್ರತಿವರ್ಷವು ಮಳೆ ಇಲ್ಲದ್ದು ಕಾಳುತುಟ್ಟಿ ಆದ್ದು ದೇಶದಲ್ಲಿ ನೀರು ಇಲ್ಲದ್ದು ನಿಮ್ಮ ಪಶುಗಳಿಗೆ ಹೊಲ ಇಲ್ಲದ್ದು ಜನಗಳು ತಮ್ಮ ತಮ್ಮ ಗ್ರಾಮಬಿಟ್ಟು ಅನ್ನ ನೀರು ಇಲ್ಲದೆ ಗ್ರಾಮಾಂತರ ಹೋಗುವದೂ ನೋಡಿದರೆ ಇದು ನೀವು ಮಾಡಿದ ದುಷ್ಕೃತ್ಯದಿಂದ ನಿಮಗಾಗಿ ಬಂದ ದೋಷವೋ ಅಥವಾ ನಮ್ಮ ದೋಷವೋ ನಾವು

ತೃಣ ಭಕ್ಷಿಸುವ ಜೀವಿಗಳಾಗಿರುತ್ತೇವೆ. ನಮ್ಮನ್ನು ನೋಡಿ ನಿಮಗೆ ಸಹನ ವಿಲ್ಲದ್ದರಿಂದ ನಿಮ್ಮ ಮಕ್ಕಳಿಗೆ ಹಾಲು ತುಪ್ಪ ಹಾಕಿ ಬೆಳಿಸುವದಕ್ಕೆ ದೇವರು ಹ್ಯಾಗೆ ಸಹನ ಮಾಡ್ಯಾನು? ನಮ್ಮಗಳ ಹಿಂಸಾದಿಂದಲೇ ನಿಮ್ಮಗಳಿಗೆ ಮಹತ್ ವಿಪತ್ತುಗಳು ಮುಂದಾದರೂ ಬಂದಾವು. ದೇವರು ಶಾಂತನಾಯಕ ಮತ್ತು ರೋಗನಾಯಕ. ಅಂದಮೇಲೆ ದೇವರಲ್ಲಿ ಸಹಸ್ರಗಟ್ಲೆ ನಮಗೆ ತಿಳಿಯದ ರೋಗಗಳು ಅವೆ. ಇನ್ನುಮೇಲೆ ಈ ರೋಗಗಳು ( ಪ್ಲೇ, ಇ, ಕಾ ) ದೇವರ ಸಮೀಪಕ್ಕೆ ಹೋಗಿ ವಿಜ್ಞಾಪನೆ ಮಾಡಿಕೊಂಡವು. ಏನಂದರೆ ಸ್ವಾಮಿನ್, ತಮ್ಮ ಆಜ್ಞಾಪ್ರಕಾರ ಲೋಕನಾಶದ ಉದ್ದಿಶ್ಯವಾಗಿ ನಾವು ಮೂರು ಜನಗಳು ಹೋಗಿದ್ದೆವು. ನಮ್ಮಗಳ ಪ್ರತಾಪದಿಂದ ಎಷ್ಟು ಸಾಹಸ ಮಾಡಿ ದರೂ ಭೂಮಂಡಲದಲ್ಲಿ ಹತ್ತರಲ್ಲಿ ಒಂದು ಭಾಗ ಕೂಡಾ ಸವೆಯಲಿಲ್ಲ ಆದ ಕಾರಣ ನಮ್ಮಗಳಿಗಿಂತ ಶ್ರೇಷ್ಠವಾದವರನ್ನು ನಮ್ಮ ಸಹಾಯಾರ್ಥವಾಗಿ ಕಳುಹಿಸುವದಾದರೆ ಪುನಃ ನಾವು ಹೋಗಿ ದುಷ್ಟರನ್ನು ಹುಡುಕಿ ಹುಡುಕಿ ನಿರ್ಮೂಲ ಮಾಡುತ್ತೇವೆ, ಎಂದು ವಿಜ್ಞಾಪನೆ ಮಾಡಿಕೊಂಡ ವಿಷಯ ನಮ್ಮಗಳಿಗೆ ಗೊತ್ತು ಅದೆ.

ಆದ್ದರಿಂದ ಭಾರತೀಯರೇ ಮುಂದೆ ಬರತಕ್ಕ ವಿಪತ್ತುಗಳಿಗೆ ನಿಶ್ಚ ಯವಾಗಿ ಸಿಗಬೇಡಿರಿ. ಇದು ನಿಜ. ನಿಜ, ಇದೇ ನಿಮಗೆ ಪ್ರಾರ್ಥನೆ.

## ಅಲ್ಲೀ ಸಹೋದರರರ ಆದರಣಿಮಸ್ತು.

ಅರಣ್ಯವಾಸಿಗಳಾದ ಚಿಗುರಿ ಯಾನೆ ಹುಲ್ಲೀಕರ ಸಾರಂಗ ಮಿಕ ಇತ್ಯಾದಿ ಮೂಕಪ್ರಾಣಿಗಳ ವಿಜ್ಞಾಪನೆಗಳು—ಅಯ್ಯಾ, ದೀನಾತ್ಮಪೋಷ ಕರೇ, ನಾವುಗಳು ಯಾರಿಗೂ ತೊಂದರೆ ಕೊಡದೆ ಯಾವ ವಿಧವಾದ ಅಪ ರಾಧಗಳನ್ನೂ ಮಾಡದೆ, ಭಗವನ್ನಿಯಾಮಕವಾದ ಆಹಾರವನ್ನು ಭುಂಜಿಸ ತಕ್ಕ ಅರಣ್ಯವಾಸಿಗಳನ್ನು ಘೋರ ಹಿಂಸೆಯನ್ನು ಕೊಟ್ಟು, ಹತಮಾ ಡುವ ಹಂತ್ಯಕ ಬೇಟೆಗಾರರ ಕ್ರೂರತ್ವವನ್ನು ನೋಡಿರಿ! ಅರಣ್ಯದಲ್ಲಿರುವ ನಿಸ್ಸಾರವಾದ ಹುಲ್ಲು ಸದೆ ಸೊಪ್ಪುಗಳನ್ನು ಮೇದು ಕಣ್ಣಿಗೆ ಇರುವ ನೀಳೆ

ಬೇಲಿಗಳ ಒಳಗೆ ಸದಾ ದೈವಚಿಂತಕರಾಗಿ ಸುಖನಿದ್ರೆ ಮಾಡುತ್ತಾ ಇರಲು ದಯಾಳುತ್ವ ನಾಶಕರಾದ ಹಂತಕ ಬೇಟೆಗಾರರು, ನಮ್ಮ ಸುತ್ತಲು ಬಲೆಗಳನ್ನು ಹಾಕಿ ಲಾಟಿ ತುಪಾಕಿ ವಗೈರೆ ಆಯುಧಪಾಣಿಗಳಾಗಿ ಹೆಚ್ಚಿನ ಶೂರರಂತೆ ನಿಂತುಕೊಂಡು, ನಾಯಿಗಳನ್ನು ಛೂ ಬಿಟ್ಟು ಎಬ್ಬಿಸಲು ಕೂಡಲೇ ಘಾಬರಿಯಿಂದ ಎದ್ದು ದಿಕ್ಕು ತೋರದೆ ನಮ್ಮ ಹೆಣ್ಣು ಮತ್ತು ಮಕ್ಕಳು ದಿಕ್ಕಾಪಾಲಾಗಿ ಓಡುತ್ತಿರಲು, ಕೆಟ್ಟ ಹೃದಯರಾದ ಘಾತಕರು ಲಾಟೀಗಳಿಂದ ಹೊಡಿಯುವದು, ತುಪಾಕಿಯಿಂದ ಸುಡುವುದು, ಆಯುಧಗಳಿಂದ ತಿವಿಯುವದು, ಇದುಅಲ್ಲದೆ ಬಲೆಗಳಲ್ಲಿ ಸಿಲ್ಕಿಸುವುದು, ಅತಿಹರ್ಷಸಂತೋಷದಿಂದ ಹಾರ್ಯಾಡುವುದು ಮನುಷ್ಯತ್ವವೇ. ಅಲ್ಲದೆ ನಮ್ಮ ಮೃತ್ಯುದೇವತರಾದ ಹುಲಿ, ಕಿರುಬ, ತೋಳ ವಗೈರೆ ಘಾತಕ ಮೃಗತ್ವವೇ. ಸರ್ವ ಮಾನುಷ್ಯ ಮಹಾತ್ಮ ಬೇಟೆಗಾರರೇ, ಬ್ಯಾಡಿ, ಬ್ಯಾಡಿ, ಸಾರವಿಲ್ಲದ ಸೆದೆಸೊಪ್ಪುಗಳನ್ನು ಮೇದ ನಮ್ಮ ನಿಸ್ಸಾರವಾದ ಮಾಂಸಭಕ್ಷಣೆಯನ್ನು ಬಿಡಿ. ಸಾಧುಪ್ರಾಣಿಗಳಿಗೆ ಪ್ರಾಣದಾನವನ್ನು ಕೊಡಿ. ಸದಾಶಿವನ ಧ್ಯಾನವನ್ನು ಮಾಡಿ. ಖಾವಂದರೇ, ನೀವು ಪ್ರಯೋಗಿಸುವ ಲಾಟೀ ಬರ್ಚಿ ಗುಂಡುಗಳ ಪೆಟ್ಟಿಗೆ ನಮ್ಮ ದೇಹವೆಲ್ಲಾ ಘಾಯವಾಗಿ ಹಾಯ, ಹಾಯ, ಬಾಧೆಯನ್ನು ತಾಳಲಾರದೆ ಅತಿಸಂಕಟದಿಂದ ಪ್ರಾಣಗಳನ್ನು ಬಿಡುವುದು, ನಿಮಗೆ ಹೆಚ್ಚಿನ ಹರುಷವೇ? ಶಿವ, ಶಿವ, ನಿಮ್ಮ ಅಂತ್ಯಕಾಲದಲ್ಲಿ ಯಮದೂತರು ಎಳೆದೊಯ್ಯುವಾಗ ನಿಮಗೆ ನಮ್ಮ ದುಃಖವು ತೋರುವುದು.

## ಕೋಳಿ ಕೊಕ್ಕರೆ ಗೋಂಜನಹಕ್ಕಿ ಇತ್ಯಾದಿ ರೆಕ್ಕೆಯುಳ್ಳ ಪಕ್ಷಿಗಳ ವಿಜ್ಞಾಪನೆ.

ಅಯ್ಯಾ—ಶತ್ರುಚಿಂತಕರೆನಿಸಿಕೊಂಡಥಾ ಮನುಜರೇ ನಾವು ಚಿಕ್ಕ ಚಿಕ್ಕ ಪ್ರಾಣಿಗಳಾದಾಗ್ಯೂ, ಮಾನುಷ್ಯ ಮಹಾತ್ಮರಿಗೆ ಅಸಾಧ್ಯವಾದ ಗೂಡುಗಳನ್ನು ಕಟ್ಟಿಕೊಂಡು ಯಾರಿಗೂ ಏನೂ ತೊಂದರೆ ಕೊಡದೆ ಅರಣ್ಯದೊಳಗೆ ಬೆಳೆದ ಹಣ್ಣು ಹಂಪಲು ಧಾನ್ಯಾದಿಗಳನ್ನು ತಿನ್ನುತ್ತಾ ನಮ್ಮ

ಯೋಗ್ಯತಾನುಸಾರ ನಿಮ್ಮ ಮನಸ್ಸನ್ನು ಆನಂದಪಡಿಸುತ್ತಾ ಸದಾಕುಶಲತೆಯಿಂದ ಇರುವ ದೀನಪ್ರಾಣಿಗಳನ್ನು ಕೊಂದು ತಿನ್ನುವ ಉದ್ದಿಶ್ಯವಾಗಿ ಬಲೆಗಳನ್ನು ಹಾಕುವುದು ಅಂಬುಗಳಿಂದ ಹೊಡೆಯುವುದು ಕೋವಿಗಳಿಂದ ಸುಡುವುದು ವಿಷಪದಾರ್ಥಗಳನ್ನು ಇಟ್ಟು ಹಿಂಸಾಮಯದಿಂದ ಕೊಂದು ತಿನ್ನುವುದು ಮನುಷ್ಯತ್ವವೇ? ಅಲ್ಲದೆ ಹೆಣಗಳನ್ನು ತಿನ್ನುವ ರಣ ಹದ್ದುಗಳೇ!

ಅಯ್ಯಾ ಮಾನುಷಶ್ರೇಷ್ಠರಾದ ಮಹನೀಯರೇ, ಪ್ರತಿದಿನ ಪ್ರಾತಃಕಾಲದಲ್ಲಿ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಮಹೇಶ್ವರನ ಧ್ಯಾನಕ್ಕೂ ಮತ್ತು ನಿಮ್ಮ ಕೆಲಸ ಕಾರ್ಯಗಳನ್ನು ನೆರವೇರಿಸಲು ಮರೆತು ಸ್ಮರಣೆಯಿಲ್ಲದೆ ನಿದ್ರೆ ಮಾಡುವುದನ್ನು ಕಂಡು ಈ ದಿವಸ ಪ್ರಾತಃಕಾಲ ಅನರ್ಥವಾಗುತ್ತದಲ್ಲಾ ಯೆಂದು ಎಚ್ಚತ್ತು ಮುಂದಾಳುಗಳಾಗಿ ಕೊಕ್ಕರಕೋ ಎಂದು ಕೂಗಿ ಎಚ್ಚರಿಸುವ ಕೋಳಿಗಳು ನಾವು ಅಲ್ಲವೇ!

ಇದೂ ಅಲ್ಲದೆ—

ಕಂದ || ಸುಷುಪ್ತಿ ಸಮೇತದಿಂದಿರಲ್ ಜನಿತಕಾಯ್ತು ಭವದಿ ಯಾ
ತಪದರಿಯ ಬೆಳಗಲು ಮಹಾ ತರುಣಿ ಬಾರೆಂದು ಕೋಳಿಗಳ್
ಕೂಗಿದವು || (ಜೈಮಿನಿ ಭಾರತ)

ಈ ರೀತಿಯಾಗಿ ಸೂರ್ಯನಾರಾಯಣನನ್ನು ಸ್ತೋತ್ರಮೂಲಕ ಬರಮಾಡಿ ಬೆಳಗುಹಾಸುವ ಕುಕ್ಕುಟಗಳು ನಾವಲ್ಲವೇ? ಸದಾ ಭಗವತ್ ಚಿಂತನೆಯುಳ್ಳ ಕೋಳಿಗಳಾದ ನಾವು ಅತಿ ವಿಶ್ವಾಸ ನಂಬಿಕೆಯಿಂದ ನಿಮ್ಮ ಆಶ್ರಯದೊಳಗಿರುವ ನೀಚಸ್ಥಾನವಾದ ಹಿತ್ತಲು ಬಚ್ಚಲುಗಳಲ್ಲಿ ಮತ್ತು ಕೊಳೆಯಿಂದ ವಾಸನೆಯುಳ್ಳ ಗೊಬ್ಬರಗಳಲ್ಲಿ ಇರುವ ಕೊಳೆಕಲ್ಮಷಗಳನ್ನು ಮತ್ತು ಅತಿ ನೀಚಪದಾರ್ಥಗಳನ್ನು ತಿಂದು ಜೀವಿಸುತ್ತಾ ನಿಮ್ಮ ಆತ್ಮಜಾಗ್ರತಿಗೂ ಮತ್ತು ಹಿತ್ತಲು ವಗೈರೆ ಸ್ಥಳದ ದುರ್ವಾಸನೆ ಇಲ್ಲದಂತೆ ನಿಮ್ಮ ದೇಹದ ಆರೋಗ್ಯಕ್ಕೂ ನಮ್ಮ ಯೋಗ್ಯತಾನುಸಾರ ಸಹಾಯ ಮಾಡುವುದನ್ನು ಕಂಡು ಇಂದು ಪ್ರತಿ ಸಹಾಯವಾಗಿ ಮಾಡುವ ಹಿಂಸೆ

ಯನ್ನು ನೋಡಿರಿ. ಪ್ರೀತಿಯಿಂದ ಅಂತಃಕರಣೆಯನ್ನು ತೋರಿಸುತ್ತಾ ಭೋ ಭೋ ಎಂದು ಕರೆದು, ಧಾನ್ಯಾದಿಗಳನ್ನು ಹಾಕಿ ಮಕ್ಕಳಂತೆ ಪೋಷಿಸಿ ನರಕವಾಸನೆಯುಳ್ಳ ನಮ್ಮ ಮಾಂಸಭಕ್ಷಣಾಪೇಕ್ಷಕರಾಗಿ ತಕ್ಷಣದಲ್ಲಿಯೇ ಮೇಲ್ಕಂಡ ಪ್ರೀತಿ ಅಂತಃಕರುಣೆಯನ್ನು ನಾಶಪಡಿಸಿಕೊಂಡು ಕ್ರೂರವಾದ ಕಠಿಣತ್ವವನ್ನು ವಹಿಸಿಕೊಂಡು ತುಂಬಿದ ಪ್ರಾಣಿಗಳನ್ನು ಹಿಡಿದು ಪ್ರಾಣ ಏರಲಿಕ್ಕೇ ತುಪ್ಪಟವನ್ನು ಕಿತ್ತಿ ಸುಟ್ಟುಕೊಂಡು ತಿನ್ನುವುದು; ಮತ್ತು ಕತ್ತಿಗಳಿಂದ ಕುತ್ತಿಗೆ ಕೊಯ್ಯುವುದು, ಇದೂ ಅಲ್ಲದೆ ಒಂದುಗ್ರಾಮ ದಿಂದ ಮತ್ತೊಂದು ಗ್ರಾಮಕ್ಕೆ ನಮ್ಮನ್ನು ತೆಗೆದುಕೊಂಡು ಹೋಗಬೇ ಕಾದರೆ, ಕಾಲುಗಳನ್ನು ಕಟ್ಟಿ, ತಲೆ ಕೆಳಗೆ ಮಾಡಿ ಕಾಲು ಮೇಲೆ ಮಾಡಿ ಕಟ್ಟಿಗೆಗೆ ಸಿಗಹಾಕಿಕೊಂಡು ನೇತಾಡಿಸುತ್ತಾ ತೆಗೆದುಕೊಂಡು ಹೋಗ ವಾಗ ನಮ್ಮಗಳ ದೇಹದ ರಕ್ತವೆಲ್ಲಾ ಕಣ್ಣಿಗೆ ಇಳಿದು, ಘೋರ ಹಿಂಸೆ ಯನ್ನು ಪಡುತ್ತಾ ದೇಹವೆಲ್ಲಾ ಉರಿಬಿದ್ದು ಬಾಧೆ ತಾಳಲಾರದೆ, ಶ್ರೀ ಹರಿಹರೇಶ್ವರನೇ, ಪ್ರಾತಃಕಾಲದಲ್ಲಿ ನಿಮ್ಮ ಧ್ಯಾನವಿಲ್ಲದೆ ಮೈಮರೆತು ಮಲ ಗಿದ್ದ ಮನುಷ್ಯರನ್ನು, ಎಬ್ಬಿಸಿದ ಉಪಕಾರಕ್ಕೆ ಪ್ರತಿ ಉಪಕಾರವಾಗಿ ಮಾಡುವ ಹಿಂಸೆಯನ್ನು ನೋಡಿದಿಯಾ? ಜಗದೀಶಾ ನಿನ್ನಗಪೇಕ್ಷವಾಗ ಲೆಂದು ಕೊರ್ರ ಎಂದು ಕೂಗಲು, ಮನುಜನಾಕಾರವುಳ್ಳ ಪಿಶಾಚನು, ಎತ್ತಿ ನೆಲಕ್ಕೆ ಹೊಡಿಯುವನು. ಇಂಥಾ ಮನುಜರಿಗೆ ನರಕವು ಬೇರೇ ಇದೆಯೋ? ಅಥವಾ ಇಲ್ಲವಾದರೆ ನಮ್ಮ ದುರ್ಗಂಧ ಉಳ್ಳ ಮಾಂಸವು, ಪ್ರತ್ಯಕ್ಷ ನರಕವು. ಘನತೆಯುಳ್ಳ ಮನುಜರೇ, ಚನ್ನಾಗಿ ತಿಳಿದು ನೋಡಿರಿ. ಗಿಡ ಗುಡ್ಡಗಳಲ್ಲಿ ಕಲ್ಪಿತ ದೇವ ದೇವತೆಯರನ್ನು ನೇಮಿಸಿಕೊಂಡು ನಿಮ್ಮ ಮಕ್ಕ ಳಂತೆ ನಂಬಿಕೊಂಡಿರುವ ನಮ್ಮನ್ನು ಬಲಿಕೊಡಬೇಡಿರಿ. ನರಕವಾಸನೆಯುಳ್ಳ ಪಕ್ಷಿಗಳ ಮಾಂಸವನ್ನು ಭಕ್ಷಿಸದೇ, ಜಗದೀಶನ ಸೃಷ್ಟಿಗೆ ವಿರುದ್ಧರಾಗಿ ನೀಚರಾಗಬೇಡಿರಿ. ದೈವಾನುಗ್ರಹಮಸ್ತು.

**ಸೂತಕವು ಸೂತಕವು!** ನಮ್ಮ ದತ್ತುಸಂತಾನದ ಹಿಂಸಾಮಯದ ಕೊ ಲೆಪಾತಕದಿಂದ ಘೋರಸೂತಕವು. ಇಡಿಪ್ರಪಂಚವೇ ಸೂತಕವು. ಸೂತಕ

ವೆಂಬುವ ಮಹಾಪಾತಕದೊಳ್ ಬಿದ್ದು ನರಳಾಡುತ್ತದೆ. ಭಾರತೀಯರೇ ನನ್ನ ಆತ್ಮಬಂಧುಗಳೇ, ಈ ಲೇಖವನ್ನು ಏಕಚಿತ್ತರಾಗಿ ಓದಿ ಸರ್ವ ಮನುಜ ಸಹೋದರರಿಗೆ ಬೋಧಿಸಿ ಮೂಗಪ್ರಾಣಿಗಳನ್ನು ಕೊಲೆಯಿಂದ ಬಿಡಿಸಿ ಭಾರತೀಯರನ್ನು ಸೂತಕದಿಂದ ತಪ್ಪಿಸಿ ನನ್ನ ವಿಜ್ಞಾಪನೆಗಳನ್ನು ಸಾರ್ಥಕ ಪಡಿಸುವಿರೆಂದು ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುವೆನು.

ಅಕಟಾ! ಹಾಯ ಹಾಯ! ಎಂಥಾ ಶೋಕವು ಜಗದೀಶಾ! ಎಂದಿಗೆ ನಮ್ಮ ಭಾರತೀಯರು ಕರುಣಾಳ ಹೃದಯರಾಗಿ ಸೂತಕವೆಂಬೋಪಾತಕ ದಿಂದ ಬಿಡುಗಡೆಯಾಗುವರೋ, ಈ ದೇಶೀಯರು ಎಂದಿಗೆ ಈ ಘೋರಕೃತ್ಯದ ಪ್ರಭಾವದಿಂದ ಗಡ್ಡಿಗೆ ಬೀಳುವರೋ, ಇಂಥಾ ಅಪವಿತ್ರ ಭಕ್ಷಣ ದಿಂದ ಎಂದಿಗೆ ಪವಿತ್ರರಾಗುವರೋ! ಅಸಹ್ಯಕರವಾದ ದುರಾಚಾರದೊಳ್ ಬಿದ್ದು ನರಳುವ ನಮ್ಮ ಸಹೋದರರು, ಎಂದಿಗೆ ಪತಿತಪಾವನರಾಗುವರೋ, ಯಾವಮಹನೀಯ ಮಹಾತ್ಮ ಸತ್ಪುರುಷರಿಂದ ಮಾನುಜ ಸಹೋದರರಲ್ಲಿ ಪ್ರವೇಶಿಸಿರುವ ಹತಾಮಯವಾದ ದುರಾಚಾರವು ತೊಲಗುವದೋ. ನಿರಪರಾಧಿಗಳಾದ ಪಶು ಪಕ್ಷಿಗಳ ವಿಜ್ಞಾಪನೆ ಎಂದಿಗೆ ಫಲಿಸುವದೋ, ನಮ್ಮ ದೇಶವು ಸದಾ ಅಹಿಂಸಾಧರ್ಮ ಪರಾಯಣದಿಂದ ಶಾಂತಸಮುದ್ರದಂತೆ ಎಂದಿಗೆ ಮೆರೆಯುವುದೋ, ಮಳೆ-ಬೆಳೆಗಳು ಸಮೃದ್ಧಿಯಾಗಿ, ಪಶು ಪಕ್ಷಿಗಳ ಸಂತತಿ ಬೆಳೆದು ಹಾಲು, ಹೈನ, ಅಮೃತಗಳು ಎಂದಿಗೆ ಹೆಚ್ಚುವವೋ, ಸರ್ವ ಮಾನುಷ್ಯ ಸಹೋದರರು ಭುಂಜಿಸಿ, ಎಂದಿಗೆ ಸದಾನಂದ ಪಡುವರೋ, ಓ ಸಾಧುಜನ ಸಂರಕ್ಷಕರಾದ ಸಚಿತ್‌ಸಂಪನ್ನರೇ, ಜೀವನ್ಮುಕ್ತರಾದ ಮಹನೀಯ ಮಹಾತ್ಮರೇ, ಭಾರತೀಯರನ್ನು, ಸನ್ಮಾರ್ಗ ಪ್ರವರ್ತನೆಯಿಂದ ನಡಿಸಲು, ಬದ್ಧ ಕಂಕಣವನ್ನು ಕಟ್ಟಿಕೊಂಡ ಸಪ್ತ ಋಷಿವರ್ಯರೇ, ಓ ಅವತಾರ ಪುರುಷರೇ, ಬನ್ನಿ, ಬನ್ನಿ, ಬೇಗಬನ್ನಿ, ತಡಮಾಡದೇ ಅವಿತರಿಸಿ, ತಮ್ಮ ಸಂತತಿಯಲ್ಲಿ, ಜನಿಸಿದ ಭಾರತೀಯರನ್ನು ಆಕ್ರಮಿಸಿಕೊಂಡಿರುವ ರಾಕ್ಷಸತ್ವವನ್ನು ಛೇದಿಸಿ ಛೇದಿಸಿ.

ಹೇ ಪರಮ ದಯಾನಿಧಿಯಾದ ಓ ಕರುಣಾಸಮುದ್ರನೇ, ನಮ್ಮವರಲ್ಲಿ ವಾಸವಾಗಿರುವ ನಿರ್ದಯ ಧಾರಣವನ್ನು ನಾಶಪಡಿಸಿ, ಹಿಂಸಾಮಯವಾದ ಹತಗಳಿಂದ ಹರಿಯುವ ರಕ್ತ ಪ್ರವಾಹದ ಪಾತಕದಲ್ಲಿ ಮುಳುಗಿದ ಸಹೋದರರನ್ನು ಎಳೆದು ಗಡ್ಡಿಗೆ ಹಾಕಿ ಈ ತೀಕ್ಷ್ಣವಾದ ನಿರ್ದಯಾ ಶಸ್ತ್ರವನ್ನು ಇವರ ಹೃದಯದಿಂದ ನಿವರ್ತಿಮಾಡು. ಓ ಜಗದೀಶಾ, ನೀ ಕಾಯ್ಯೆ, ನೀ ಕಾಯ್ಯೆ. ದೀನ ಮಕ್ಕಳಾದ ಪಶು-ಪಕ್ಷಿಗಳ ವಿಜ್ಞಾಪನೆ ಅಂಗೀಕರಿಸಿ, ನಿಮ್ಮ ಜಗತ್ತಿನಲ್ಲಿ ಪ್ರವೇಶಿಸಿ ಇರುವ ನಿರ್ದಯಾಕರವಾದ ದುರಾಚಾರವನ್ನು ನಾಶಪಡಿಸಿ ಸರ್ವಮಾನುಷ್ಯ ಸಹೋದರರ ಹೃದಯದೊಳು ಅಪಾರವಾದ ಕರುಣೆಯನ್ನು ಪ್ರಸಾದಿಸಿ, ಸಹೋದರರನ್ನು ಅವರಿಸಿಕೊಂಡು ಇರುವ ಸೂತಕವೆಂಬುವ ಮಹಾಪಾತಕವನ್ನು ತ್ಯಜಿಸು. ಸರ್ವ ಮಾನುಷ್ಯಾತಿಶಯರೇ, ಈ ಲೇಖವನ್ನು ಸರ್ವ ಭಾಷೆಯಲ್ಲಿ ತರ್ಜುಮಿಸಿ ಸರ್ವ ಮಾನುಷ ಸಹೋದರರಿಗೆ ಬೋಧಿಸಿ ಸರ್ವ ಮೂಕಪ್ರಾಣಿಗಳನ್ನು ಉದ್ಧರಿಸಿ, ಸರ್ವಾಂತರ್ಯಾಮಿಯಾದ ಸದಾಶಿವನ ಅನುಗ್ರಹಕ್ಕೆ ಪಾತ್ರರಾಗಿ ಸರ್ವಾತ್ಮಶ್ರೇಷ್ಠವಾದ ಜನ್ಮವನ್ನು ಸಾರ್ಥಕಪಡಿಸುವಿರೆಂದು ನನ್ನ ಅಭಿನಯ ವಂದನೆ.

(ಸರ್ವಾತ್ಮ ಸುಖಿನೋ ಭವಂತು ಶಾಂತಿಃ ಶಾಂತಿಃ ಶಾಂತಿಃ)

## ಪಶುಪಕ್ಷಿಗಳ ರಕ್ಷಣೆ ಸಹಾಯಂ ಕೊಡುವ ದಾನಂ ಮಹಾ ಪುಣ್ಯಾಂ

ಅಯ್ಯಾ ಅನುಜರೇ, ಪಶುಪಕ್ಷಿಗಳನ್ನು ಆದರಿಸುವ ಮಿತ್ರರೇ ಕೆಲವು ದಿವಸಗಳ ಕೆಳಗೆ ಪೂರ್ವಾರ್ಜಿತ ಕರ್ಮದಿಂದಲೋ ಹೀಯಾರ್ಜಿತ ಕರ್ಮದಿಂದಲೋ ನನಗೆ ಹೆಚ್ಚಿನ ಸಂಕಟವು ಪ್ರಾಪ್ತವಾಯಿತು. ಬಂದಂಥ ಸಂಕಟವು ಅಧಿಕ ಕ್ರೂರತ್ವದಿಂದ ಬಾಧಿಸದೆ ಪರಿಹಾರವಾಗದೇಕಾದರೆ ದೈವಿಕ ಸ್ವಭಾವವುಳ್ಳ ಸತ್ಕರ್ಮದಿಂದಲೇ ಬಂದಂಥ ಸಂಕಟಗಳು ಪರಿಹಾರವಾಗುತ್ತವೆ, ಹೊರತು ಇನ್ನು ಯಾವ ವಿಧವಾದ ಪರಿಹಾರವಿಲ್ಲ

ವೆಂದು ಮಹಾತ್ಮರು ಅಪ್ಪಣೆ ಕೊಟ್ಟಿರುತ್ತಾರೆ. ಆದ್ದರಿಂದ ಬಂದಂಥ ಸಂಕಟವನ್ನು ಅನುಭವಿಸುತ್ತಾ ಈ ಲೇಖನವನ್ನು ಬರೆದೆನು.

ನನ್ನ ದೇಹ ಪೋಷಕರಾದ ಮ. ರಾ. ವೆಂಕಟಸ್ವಾಮಯ್ಯನವರಿಗೂ, ಈಚಂದ್ರಿಕೆಯನ್ನು ಒಂದುಸಾವಿರ ಪ್ರತಿಗಳನ್ನು ಛಾಪಿಸಲು ಹಣಸಹಾಯ ಮಾಡಿದ ಬಳ್ಳಾರಿ ದಿವ್ಯಗುಡಿಯಪ್ಪನವರಿಗೂ ಇವರ ಆಶ್ರಯದೊಳಗೆ ಜೀವಿಸತಕ್ಕ ಮಿತ್ರರಿಗೂ ನನ್ನ ಮನಃಪೂರ್ವಕ ವಂದನೆಗಳು.

ಕರುಣವುಳ್ಳ ಮನಸ್ಸೇ ದೇವರು. ದಯಾಳತ್ವವುಳ್ಳ ಹೃದಯವೇ ದೇವಾಲಯವು. ಅಂತಃಕರುಣವುಳ್ಳ ಮನುಷ್ಯನೇ ಸದಾಪೂಜ್ಯನು, ಎಂಬುವಂತೆ ಎಲ್ಲಾ ಸಹೋದರರು ಧರ್ಮವನ್ನು ಅರಿತು ಪಶು-ಪಕ್ಷಿಗಳ ಜೀವ ದಾನವನ್ನು ಕೊಡಬೇಕಾಗಿ ಈ ಚಂದ್ರಿಕೆಯನ್ನು ಉಚಿತಾರ್ಥವಾಗಿ ಹಂಚುವೆವು. ಇದನ್ನು ನಿಷ್ಪ್ರಯೋಜಕವಾದ ಕಾಗದಗಳ ಜೊತೆಯಲ್ಲಿ ಸೇರಿಸಿ ಸಕ್ಕರಿ ಮಿಠಾಯಿ ಪಟ್ಟಣಗಳಿಗೆ ಉಪಯೋಗಿಸದಂತೆ ಪೂಜನೀಯವಾಗಿ ಭಾವಿಸತಕ್ಕದ್ದು. ಪಶು-ಪಕ್ಷಿಗಳ ಆಪತ್ ಬಂಧುಗಳೇ, ಬಾಯಿಲ್ಲದ ದೀನಪ್ರಾಣಿಗಳ ರಕ್ಷಕರೇ, ೧೦೦೦೦ ಸಾವಿರ ಚಂದ್ರಿಕೆಗಳನ್ನು ಛಾಪಿಸಬೇಕಾಗಿ ಇದೆ. ಕೇವಲ ಬಡವನಾದ ನಾನು ಈ ಚಂದ್ರಿಕೆಗಳನ್ನು ಛಾಪಿಸಲು ಹಣಸಹಾಯ ಮಾಡುವ ಮಹನೀಯರನ್ನು ಎದುರು ನೋಡುತ್ತಾ ಇದ್ದೇನೆ. ಕರಣವುಳ್ಳ ಸಹೋದರರು ಅವರವರ ಶಕ್ತ್ಯಾನುಸಾರ ಈ ಕೆಳಗಿನ ಅಡ್ರೆಸ್ಸಿಗೆ ಮನಿಆರ್ಡರಮೂಲಕಧರ್ಮಾರ್ಥವಾಗಿ ಭಿಕ್ಷವನ್ನು ಪ್ರಾಸಾದಿಸಿ ಜಗದೀಶನ ಸೃಷ್ಟಿಗೆ ವಿಘ್ನವಿಲ್ಲದಂತೆ ಜೀವಹಿಂಸೆಇಲ್ಲದಂಥ ಅಹಿಂಸಾಮಹಾಯಜ್ಞವನ್ನು ಬೆಳಸಿ ದೇಶ ಶಾಂತಿಯನ್ನು ಮಾಡಿ ಪುಣ್ಯವನ್ನು ಪಡಿಯಲು ಪ್ರಾರ್ಥಿಸುವ,

ಬಿ. ಅಣ್ಣಾಮಲೆ ಮೊದಲಿಯರ್. ಮೂಗಾತ್ಮ
ರಕ್ಷಕರ ಪಾದಸೇವಕನ್, ಹರಿಹರ,

# ವಂದನೆಗಳು.



ಈ ಲೇಖವನ್ನು ಸ್ವಲ್ಪದಿವಸದ ಕೆಳಗೆ ಸಮಾಪ್ತ ಮಾಡಿದೆನು. ಇದಕ್ಕೆ ಜೀವಕಳೇ ಇಲ್ಲದೆ ಪ್ರಯಾಣಕ್ಕೆ ಶಕ್ತಿ ಸಾಲದೆ ನಿರ್ಜೀವಿಯಾಗಿ ನಿದ್ರಿಸುತ್ತಾ ಇತ್ತು. ಇದನ್ನು ನಿದ್ರೆಯಿಂದ ಎಚ್ಚರಿಸಿ ಅದರಲ್ಲಿ ಇರತಕ್ಕ ತಪ್ಪುಗಳನ್ನು ಸರಿಪಡಿಸಿ, ಜೀವದಾನವನ್ನು ಕೊಟ್ಟು ಪ್ರಯಾಣಕ್ಕೆ ಶಕ್ತಿ ಉಂಟುಮಾಡಿದ ಶ್ರೀಮನ್ ಹರಿಹರ ವೀಣಾ ತಿಪ್ಪಾಜೋಯಿಸಸ್ವಾಮಿಯವರಿಗೆ ನಾನು ಮನಃಪೂರ್ವಕವಾಗಿ ಪುನಃಪುನಃ ವಂದಿಸುವೆನು.

ಬಿ. ಅಣ್ಣಾ ಮಲೆ

